# ಬೋಧಾಯನೋಕ್ತ ಶ್ರಾದ್ಧಪ್ರಯೋಗಃ

## ಶ್ರಾದ್ಧಕಾಲನಿರ್ಣಯಃ

"ಅಪರಾಹ್ಣಃ ಪಿತೄಣಾಂ" ಎಂಬ ಶ್ರುತಿವಾಕ್ಯದಂತೆ ಶ್ರಾದ್ಧಕ್ಕೆ ಪಂಚಧಾ ವಿಭಕ್ತ ದಿವಾಪ್ರಮಾಣದ 4 ನೇ ಭಾಗವು ದಿನದ ಅಪರಾಹ್ಣ ಭಾಗವಾಗುವುದು. ದಿವಾ ಪ್ರಮಾಣದ ಘಟಿ 30 ಇರುವಾಗ 18 ಘಟಿಯ ನಂತರ 24 ಘಟಿಯ ತನಕ ಅಪರಾಹ್ಣವಾಗುವುದು. ದಿವಾ ಪ್ರಮಾಣವು ಹೆಚ್ಚು ಕಡಿಮೆಯಾದಂತೆ ಅಪರಾಹ್ಣ ವಿಭಾಗವೂ ಹೆಚ್ಚು ಕಡಿಮೆಯಾಗುವುದು ಸ್ಪಷ್ಟ ವಿಷಯ. ಸಂಪೂರ್ಣ ಅಪರಾಹ್ಣ ಅಥವಾ ಏಕದೇಶೀಯ ವ್ಯಾಪ್ತಿಯುಳ್ಳ ಮೃತತಿಥಿಯ ಬಗ್ಗೆ ಸಂಶಯವೇ ಇಲ್ಲ. ಎರಡು ದಿನದ ಅಪರಾಹ್ಣಗಳಲ್ಲಿ ಮೃತತಿಥಿಯು ಬಂದಲ್ಲಿ ಯಾವ ದಿನ ಅಪರಾಹ್ಣದಲ್ಲಿ ಮೃತತಿಥಿಯು ಹೆಚ್ಚು ಸಿಗುವುದೋ ಆ ದಿನ ಶ್ರಾದ್ಧ ಮಾಡತಕ್ಕದ್ದು. ಈ ವಿಚಾರಗಳನ್ನು ಕಾಲಮಾಧವೀಯಾದಿ ಗ್ರಂಥಗಳಲ್ಲಿ ನೋಡಬಹುದು.

### ಆಶೌಚ ವಿಚಾರ

ವ್ರತಯಜ್ಞವಿವಾಹೇಷು ಶ್ರಾದ್ಧೇ ಹೋಮಾರ್ಚನೇ ಜಪೇ ।
ಆರಬ್ಧೇ ಸೂತಕಂ ನ ಸ್ಯಾದನಾರಬ್ಧೇ ತು ಸೂತಕಂ ॥
ಪ್ರಾರಂಭೋ ವರಣಂ ಯಜ್ಞೇ ಸಂಕಲ್ಪೋ ವ್ರತಸತ್ರಯೋಃ ।
ನಾಂದೀಮುಖಂ ವಿವಾಹಾದೌ ಶ್ರಾದ್ಧೇ ಪಾಕಪರಿಕ್ರಿಯಾ ॥

ವ್ರತ, ಯಜ್ಞ, ವಿವಾಹ, ಶ್ರಾದ್ಧ, ಹೋಮ, ಅರ್ಚನ, ಜಪ ಇವು ಪ್ರಾರಂಭವಾದ ಮೇಲೆ ಯಜಮಾನನಿಗೆ ಆಶೌಚವು ಬಾಧಿಸುವುದಿಲ್ಲ. ಯಜ್ಞದಲ್ಲಿ ವರಣವೂ ವ್ರತಹವನಾದಿಗಳಲ್ಲಿ ಸಂಕಲ್ಪವೂ, ಉಪನಯನವಿವಾಹಾದಿಗಳಲ್ಲಿ ನಾಂದೀ ಶ್ರಾದ್ಧವೂ, ಶ್ರಾದ್ಧಗಳಲ್ಲಿ ಪಾಕಸಿದ್ಧತೆಯೂ ಆರಂಭವೆನಿಸಲ್ಪಡುವುದು.

ನಿಮಂತ್ರಣೋತ್ತರಂ ಶ್ರಾದ್ಧೇ ಪ್ರಾರಂಭಸ್ಯಾದಿತಿ ಸ್ಮೃತಿಃ ।

ಎಂಬ ವಿಚಾರವೂ ಹೇಳಲ್ಪಟ್ಟಿದೆ.

## ಶ್ರಾದ್ಧಕ್ಕೆ ನಿಷಿದ್ಧ ಪ್ರದೇಶ

ಪರಕೀಯಗೃಹೇ ಯಸ್ತು ಸ್ವಪಿತ್ರ್ಯಾನ್ಸ್ತರ್ಪಯೇದ್ಯದಿ ।
ಭೂಮೇಸ್ತು ಸ್ವಾಮಿನಸ್ತಸ್ಯ ಹರಂತಿ ಪಿತರೋ ಬಲಾತ್ ॥

ಯಾವನು ಪರಗೃಹದಲ್ಲಿ ತನ್ನ ಪಿತೃಶ್ರಾದ್ಧವನ್ನು ಮಾಡುವನೋ ಅದನ್ನು ಆ ಪರಗೃಹಸ್ಥನ ಪಿತೃಗಳೇ ಬಂದು ಬಲಾತ್ಕಾರದಿಂದ ಸ್ವೀಕರಿಸುವರು.

## ಶ್ರಾದ್ಧಕ್ಕೆ ಬ್ರಾಹ್ಮಣರು

ಗೃಹಸ್ಥಾಃ ಕುಲಸಂಪನ್ನಾಃ ಪ್ರಖ್ಯಾತಾಃ ಕುಲಗೋತ್ರತಃ ।
ಸ್ವದಾರನಿರತಾಃ ಶಾಂತಾಃ ವಿಜ್ಞೇಯಾಃ ಪಙ್ಕ್ತಿಪಾವನಾಃ ॥
ಅಪಮಾನಪ್ರವರಕೋಽಪ್ಯಸಗೋತ್ರಸ್ತಥೈವ ಚ ।
ಅಸಂಬಂಧೀ ಚ ವಿಜ್ಞೇಯೋ ಬ್ರಾಹ್ಮಣಃ ಶ್ರಾದ್ಧಸಿದ್ಧಯೇ ॥

ಗೃಹಸ್ಥರಾಗಿಯೂ, ಕುಲಗೋತ್ರ ಸಂಪನ್ನರಾಗಿಯೂ, ಸ್ವಪತ್ನೀನಿರತರಾಗಿಯೂ, ಸಮಾನ ಪ್ರವರರಾಗದೆ ಇರುವವರು ಹಾಗೆ ಸ್ವಗೋತ್ರದವರಾಗದೆಯೂ, ತೀರಾ ಸಂಬಂಧಿಕರಲ್ಲದೆಯೂ ಇರುವ ಬ್ರಾಹ್ಮಣರು ಶ್ರಾದ್ಧಕ್ಕೆ ಶ್ರೇಷ್ಠರು.

ಪಿತೃಪುತ್ರೌ ಭ್ರಾತರೌ ವಾ ನಿರಗ್ನಿಂ ಗರ್ಭಿಣೀಪತಿಂ ।
ಸಗೋತ್ರಪ್ರವರಂ ಚೈವ ಶ್ರಾದ್ಧೇಷು ಪರಿವರ್ಜಯೇತ್ ॥

ಶ್ರಾದ್ಧದಲ್ಲಿ ತಂದೆ ಮಕ್ಕಳನ್ನೂ, ಅಣ್ಣತಮ್ಮಂದಿರನ್ನೂ, ಏಕೋದರರರನ್ನೂ, ಔಪಾಸನಾಗ್ನಿರಹಿತರನ್ನೂ, ಗರ್ಭಿಣೀಪತಿಯನ್ನು (7 ತಿಂಗಳ ನಂತರ), ಸಗೋತ್ರ ಪ್ರವರದವರನ್ನೂ ನಿಮಂತ್ರಿಸಬಾರದು.

## ಬ್ರಾಹ್ಮಣಾಗಮನಕಾಲ

ನಿಮಂತ್ರಣಕೃತೋ ವಿಪ್ರಃ ಕುತುಪಂ ತು ವಿಚಾರ್ಯ ಚ ।
ಶ್ರಾದ್ಧಾಗಾರಂ ಸಮಾಗಚ್ಛೇನ್ನಾಗತಃ ಶ್ರಾದ್ಧಘಾತಕಃ ॥

ನಿಮಂತ್ರಿತ ಬ್ರಾಹ್ಮಣನು ಕುತಪಕಾಲ (ಹಗಲಿನ 15-16 ಘ.) ವನ್ನು ಮೀರದೆ ಶ್ರಾದ್ಧದ ಮನೆಗೆ ಹೋಗತಕ್ಕದ್ದು.

## ಬ್ರಾಹ್ಮಣಸಂಖ್ಯಾ

ದ್ವೌ ದೇವೇ ಪಿತೃಕೃತ್ಯೇ ತ್ರೀನೇಕೈಕಮುಭಯತ್ರ ವಾ ।
ಭೋಜಯೇತ್ಸ ಸಮೃದ್ಧೋಽಪಿ ನ ಪ್ರಸಜ್ಯೇತ ವಿಸ್ತರೇ ॥

ವಿಶ್ವೇದೇವರ ಸಲುವಾಗಿ ಇಬ್ಬರು, ಪಿತೃಸ್ಥಾನಕ್ಕೆ ಮೂವರು ಅಥವಾ ಒಬ್ಬೊಬ್ಬರಂತೆ ಎರಡೂ ಕಡೆಗಳಲ್ಲಿ ಬ್ರಾಹ್ಮಣರನ್ನು ಕುಳಿತುಕೊಳ್ಳಿಸುವುದು. ಎಷ್ಟು ಶ್ರೀಮಂತನಾದರೂ ಶ್ರಾದ್ಧವಿಸ್ತಾರದಲ್ಲಿ ತನ್ನ ವೈಭವವನ್ನು ತೋರಿಸಬಾರದು.

## ಶ್ರಾದ್ಧಭೋಕ್ತನ ನಿಯಮ

ಪುನರ್ಭೋಜನಮಧ್ವಾನಂ ಭಾರಾಧ್ಯಯನಮೈಥುನಂ ।
ಸಂಧ್ಯಾ ಪ್ರತಿಗ್ರಹಂ ಹೋಮಂ ಶ್ರಾದ್ಧಭೋಕ್ತಾಷ್ಟವರ್ಜಯೇತ್ ॥

ಎರಡನೆಯ ಊಟ, ದಾರಿ ನಡೆಯುವುದು, ಹೊರೆ ಹೊರುವುದು, ಅಧ್ಯಯನ, ಮೈಥುನ, ಸಂಧ್ಯಾವಂದನೆ, ಪ್ರತಿಗ್ರಹ, ಹೋಮ ಈ ಎಂಟು ವಿಷಯಗಳನ್ನು ವರ್ಜಿಸುವುದು.

## ಸಂಧ್ಯಾವಂದನೆ

ದಶಕೃತ್ವಃ ಪಿಬೇದಾಪೋ ಗಾಯತ್ರ್ಯಾ ಶ್ರಾದ್ಧಭುಗ್ದ್ವಿಜಃ ।
ತತಃ ಸಂಧ್ಯಾಮುಪಾಸೀತ ಜಪೇಚ್ಚ ಜುಹುಯಾದಪಿ ॥

ಶ್ರಾದ್ಧಭೋಕ್ತನು ಗಾಯತ್ರಿಯಿಂದ ಹತ್ತು ಸಲ ಅಭಿಮಂತ್ರಿಸಿ ಜಲಪ್ರಾಶನ ಮಾಡಿ ನಿತ್ಯ ಸಂಧ್ಯಾವಂದನೆ ಮತ್ತು ಹೋಮ ಮಾಡುವುದು.

## ಶ್ರಾದ್ಧಕರ್ತನ ನಿಯಮ

ದಂತಧಾವನತಾಂಬೂಲೇ ತೈಲಾಭ್ಯಂಜನಭೋಜನೇ ।
ರತ್ಯೌಷಧಪರಾನ್ನಂ ಚ ಶ್ರಾದ್ಧಕೃತ್ಸಪ್ತ ವರ್ಜಯೇತ್ ॥

ದಂತಧಾವನ, ತಾಂಬೂಲ, ತೈಲಾಭ್ಯಂಜನ, ಭೋಜನ, ಸ್ತ್ರೀಸಂಗ, ಪರಾನ್ನ ಇವುಗಳನ್ನು ಶ್ರಾದ್ಧಕರ್ತನು ಬಿಡತಕ್ಕದ್ದು.

## ಶ್ರಾದ್ಧದಲ್ಲಿ ಪವಿತ್ರ ವಸ್ತುಗಳು

ಉಚ್ಛಿಷ್ಟಂ ಶಿವನಿರ್ಮಾಲ್ಯಂ ವಮನಂ ಮೃತಕರ್ಪಟಂ ।
ಶ್ರಾದ್ಧೇ ಸಪ್ತಪವಿತ್ರಾಣಿ ದೌಹಿತ್ರಃ ಕುತಪಸ್ತಿಲಾಃ ॥

ಕರು ಉಂಡ ಹೆಚ್ಚಾದ ಹಾಲು , ಗಂಗಾಜಲ, ಜೇನುತುಪ್ಪ, ರೇಷ್ಮೆ, ಮಗಳಮಗ, ಕುತಪಕಾಲ, ಎಳ್ಳು ಇವುಗಳು ಶ್ರೇಷ್ಠವಾಗಿವೆ.

## ಶ್ರಾದ್ಧದಲ್ಲಿ ವರ್ಜ್ಯ

ಘಂಟಾನಿನಾದೋ ಹಯಸನ್ನಿಧಾನಂ ಶಂಬೂಕ ಶಂಖಾ ಕದಲೀದಲಂ ಚ।
ಉನ್ಮತ್ತಜಾತ್ಯರ್ಕ ಹಯಾರಿಜಾನಿ ಶ್ರಾದ್ಧಸ್ಯ ವೈಗುಣ್ಯಕರಾಣ್ಯಮೂನಿ॥

ಘಂಟೆಯ ಶಬ್ದ, ಕುದುರೆಯ ಸಾಮಿಪ್ಯ, ಮುತ್ತಿನಚಿಪ್ಪು, ಶಂಖ, ಬಾಳೆಎಲೆ, ಉನ್ಮತ್ತ ಜಾತಿ, ಎಕ್ಕೆ, ಎಮ್ಮೆಯ ಹಾಲು, ತುಪ್ಪ, ಮೊಸರು ಇವಿಷ್ಟು ನಿಷಿದ್ಧ.

## ವರ್ಜ್ಯಕರ್ಮ

ವಾಮಹಸ್ತೇಷು ದರ್ಭಾಂಸ್ತು ಗೃಹೇ ರಂಗಬಲಂ ತಥಾ।
ಲಲಾಟೇ ತಿಲಕಂ ದೃಷ್ಟ್ವಾ ನಿರಾಶಾಃ ಪಿತರೋ ಗತಾಃ॥

ಶ್ರಾದ್ಧಕರ್ತನು ಎಡಕೈಯಲ್ಲಿ ಹಿಡಿದ ದರ್ಭೆಯನ್ನೂ ಹಣೆಯಲ್ಲಿ ಇಟ್ಟ ತಿಲಕವನ್ನೂ ಮನೆಯಲ್ಲಿಯ ರಂಗವಲ್ಲಿಯನ್ನೂ ನೋಡಿ ಪಿತೃಗಳು ನಿರಾಶರಾಗುವರು.

## ಶ್ರಾದ್ಧಾರಂಭ ಕಾಲ

ಆರಭ್ಯ ಕುತಪೇ ಶ್ರಾದ್ಧಂ ಕುರ್ಯಾದಾರೌಹಿಣಂ ಬುಧಃ।
ವಿಧಿಜ್ಞೋ ವಿಧಿಮಾಸ್ಥಾಯ ರೌಹಿಣಂ ತು ನ ಲಂಘಯೇತ್॥
ಊರ್ಧ್ವಂ ಕುತಪಾತ್ ಮುಹೂರ್ತಾತ್ ಯನ್ಮುಹೂರ್ತ ಚತುಷ್ಟಯಂ।
ಮುಹೂರ್ತ ಪಂಚಕಂ ಹ್ಯೇತತ್ ಸ್ವಧಾಭವನಮಿಷ್ಯತೇ॥

ಕುತಪಕಾಲದಲ್ಲಿ ಶ್ರಾದ್ಧವನ್ನು ಆರಂಭಿಸುವುದು ರೌಹಿಣ (ದಿನದ ವಿಭಾಗದ 9 ನೇ ಪಾಲು) ವನ್ನು ಮೀರಬಾರದು. ಕುತಪದಿಂದ 5 ಮುಹೂರ್ತ 10 ಘಟಿ ಅಂದರೆ, ಘಟಿ 15 ರಿಂದ 25 ರ ತನಕ ಶ್ರಾದ್ಧಕಾಲವು. ದಿವಾ ಪ್ರಮಾಣವು ವ್ಯತ್ಯಾಸವಾದಂತೆ ಇವುಗಳು ವ್ಯತ್ಯಾಸವಾಗುತ್ತವೆ.

## ಕುಳಿತುಕೊಳ್ಳುವ ಕ್ರಮ

ದೇವಾರ್ಚನಂ ದಕ್ಷಿಣಂ ಜಾನುಂ ನಿಪಾತ್ಯ ವಾಮಮುದ್ಧೃತ್ಯ ಉತ್ತರಾಭಿಮುಖ ಉಪವಿಶ್ಯ ಕರ್ತವ್ಯಂ। ಪಿತ್ರರ್ಚನಂ ಸರ್ವತ್ರ ವಾಮಜಾನುಂ ನಿಪಾತ್ಯ ದಕ್ಷಿಣಮುದ್ಧೃತ್ಯ ಆಗ್ನೇಯಾಭಿಮುಖ ಉಪವಿಶ್ಯ ಕರ್ತವ್ಯಂ॥

ಶ್ರಾದ್ಧಕರ್ತನು ವಿಶ್ವೇದೇವರ ಅರ್ಚನೆಯಲ್ಲಿ ಬಲ ಮೊಣಕಾಲನ್ನೂರಿ ಉತ್ತರಾಭಿಮುಖನಾಗಿಯೂ ಪಿತೃಗಳ ಅರ್ಚನೆಯಲ್ಲಿ ಎಡ ಮೊಣಕಾಲನ್ನೂರಿ ಆಗ್ನೇಯಾಭಿಮುಖನಾಗಿಯೂ ಕುಳಿತಿರಬೇಕು.

## ನಾಮಗೋತ್ರೋಚ್ಚಾರಣ

**ಆವಾಹನೇಽರ್ಘ್ಯಸಂಕಲ್ಪೇ ಪಿಂಡದಾನಾನ್ನದಾನಯೋಃ ।**
**ಪಿಂಡಾಭ್ಯಂಜನಕಾಲೇ ತು ತಥೈವಾಂಜನಕರ್ಮಣಿ ॥**
**ಅಕ್ಷಯ್ಯಾಸನಯೋಃ ಪಾದ್ಯೇ ಗೋತ್ರಂ ನಾಮ ಪ್ರಕಾಶಯೇತ್ ।**
**ಕ್ಷಣೇ ಗಂಧೇ ತಥಾ ಧೂಪೇ ದೀಪದಾನೇ ಚ ಕೀರ್ತಯೇತ್॥**

ಆವಾಹನ, ಅರ್ಘ್ಯ, ಸಂಕಲ್ಪ, ಪಿಂಡದಾನ, ಅನ್ನದಾನ, ಅಂಜನ, ಅಭ್ಯಂಜನ, ಆಸನ, ಪಾದ್ಯ, ಕ್ಷಣ, ಗಂಧ, ಧೂಪ, ದೀಪ ಇವುಗಳಲ್ಲಿ ನಾಮಗೋತ್ರಗಳನ್ನು ಉಚ್ಚರಿಸುವುದು.

**ಆದೌ ಬ್ರೂಯಾತ್ ಸ್ವಪಿತ್ರಾದೀನ್ ನಾಮಗೋತ್ರಮತಃ ಪರಂ ।**
**ರೂಪಾಂತಾನಥ ವಸ್ವಾದೀನೇವಂ ಸಂಯೋಜಯೇತ್ಕ್ರಮಾತ್ ॥**

ಮೊದಲು ಪಿತೃ ಪಿತಾಮಹ ಪ್ರಪಿತಾಮಹ ಎಂದು ಆ ಮೇಲೆ ಹೆಸರು, ನಂತರ ಗೋತ್ರ ಮುಂದೆ ವಸು ರುದ್ರ ಆದಿತ್ಯ ರೂಪಗಳನ್ನು ಉಚ್ಚರಿಸುವುದು.

## ವಚನವಿಭಕ್ತಿವಿಚಾರ

ಅಕ್ಷಯ್ಯಾಸನಯೋಃ ಷಷ್ಠೀ ದ್ವಿತೀಯಾವಾಹನೇ ತಥಾ ।
ಅನ್ನದಾನೇ ಚತುರ್ಥೀ ಚ ಶೇಷಾಃ ಸಂಬುದ್ಧಯಃ ಸ್ಮೃತಾಃ ॥

ಅಕ್ಷಯ್ಯ ಆಸನಗಳಲ್ಲಿ ಷಷ್ಠೀ ವಿಭಕ್ತಿಯನ್ನು, ಆವಾಹನೆಯಲ್ಲಿ ದ್ವಿತೀಯಾ ವಿಭಕ್ತಿಯನ್ನು, ಅನ್ನದಾನದಲ್ಲಿ ಚತುರ್ಥೀ ವಿಭಕ್ತಿಯನ್ನು, ಉಳಿದ ಸಂದರ್ಭಗಳಲ್ಲಿ ಸಂಬೋಧನೆಯನ್ನೂ ಹೇಳತಕ್ಕದ್ದು.

## ಉಪವೀತಪ್ರದಕ್ಷಿಣವಿಚಾರ

ಯಜ್ಞೋಪವೀತಿನಾ ಕಾರ್ಯಂ ದೈವಂ ಕರ್ಮ ಪ್ರದಕ್ಷಿಣಂ ।
ಪ್ರಾಚೀನಾವೀತಿನಾ ಕಾರ್ಯಂ ಪಿತೃಕರ್ಮಾಪ್ರದಕ್ಷಿಣಂ ॥

ವಿಶ್ವೇದೇವರ ಅರ್ಚನೆಯಲ್ಲಿ ಬಲಕ್ಕೆ ಯಜ್ಞೋಪವೀತವೂ ಪ್ರದಕ್ಷಿಣಕ್ರಮವೂ, ಪಿತೃಗಳ ಅರ್ಚನೆಯಲ್ಲಿ ಉಪವೀತವನ್ನು ಎಡಭಾಗಕ್ಕೆ ಮಾಡಿ ಅಪ್ರದಕ್ಷಿಣೆಯ ಕ್ರಮವೂ ಇರತಕ್ಕದ್ದು.

**ಆಚಾಮೇ ಚ ಪ್ರಣಾಮೇ ಚ ಪಶ್ಚಾದ್ಧೋಮೇ ಪ್ರದಕ್ಷಿಣೇ ।**
**ಗೋತ್ರೇ ಚ ದಕ್ಷಿಣಾಯಾಂ ಚ ಸವ್ಯಮೇಷು ವಿಧೀಯತೇ ॥**

ಆಚಮನ, ನಮಸ್ಕಾರ, ಪಶ್ಚಾದ್ಧೋಮ, ಪ್ರದಕ್ಷಿಣೆ, ಅಭಿವಾದನೆ, ದಕ್ಷಿಣೆ ಕೊಡುವುದು ಇವುಗಳನ್ನು ಉಪವೀತಿಯಾಗಿ ಮಾಡತಕ್ಕದ್ದು.

ಶ್ರಾದ್ಧಾರಂಭೇಽವಸಾನೇ ಚ ಪಾದಶೌಚಾರ್ಚನಂ ತಯೋಃ ।
ವಿಕಿರೇ ಪಿಂಡದಾನೇ ಚ ಷಟ್‌ಸ್ವಾಚಮನಮಿಷ್ಯತೇ ॥

ಶ್ರಾದ್ಧದ ಆರಂಭದಲ್ಲಿ, ಅಂತ್ಯದಲ್ಲಿ ಪಾದಪ್ರಕ್ಷಾಳನದ ನಂತರ ಅರ್ಚನೆಯ ಕೊನೆಯಲ್ಲಿ ವಿಕಿರದ ನಂತರ ಪಿಂಡದಾನದ ಮೇಲೆ ಹೀಗೆ ಆರು ಕಡೆಗಳಲ್ಲಿ ಆಚಮನ ಮಾಡತಕ್ಕದ್ದು.

## ಪವಿತ್ರ ರಹಿತನಾಗಿ ಮಾಡುವ ಕಾಲ

ಸರ್ವತ್ರ ದರ್ಭಪಾಣಿಸ್ಸ್ಯಾದ್ದೈವೇ ಪಿತ್ರ್ಯೇ ಚ ಕರ್ಮಣಿ ।
ಪಾದಶೌಚಂ ಗಂಧಲೇಪಂ ನ ಕುರ್ಯಾದ್ದರ್ಭಪಾಣಿನಾ ॥

ದೇವಪಿತೃಕಾರ್ಯಗಳಲ್ಲಿ ಪಾದಪ್ರಕ್ಷಾಳನ, ಗಂಧ ಕೊಡುವುದು ಇವುಗಳ ಹೊರತಾಗಿ ಸಮಸ್ತವನ್ನೂ ಪವಿತ್ರಪಾಣಿಯಾಗಿ ಮಾಡುವುದು.

ದಾನಾಧ್ಯಯನದೇವಾರ್ಚಾ ವ್ರತಹೋಮಜಪಾದಿಕಂ ।
ನ ಕುರ್ಯಾಚ್ಛ್ರಾದ್ಧ ದಿವಸೇ ಪ್ರಾಗ್ವಿಪ್ರಾಣಾಂ ವಿಸರ್ಜನಾತ್ ॥

ದಾನ, ಅಧ್ಯಯನ, ದೇವಪೂಜೆ, ವ್ರತ, ಹೋಮ, ಜಪ, ಮೊದಲಾದ್ದನ್ನು ಶ್ರಾದ್ಧಾರಂಭದಿಂದ ಬ್ರಾಹ್ಮಣ ವಿಸರ್ಜನೆಯವರೆಗೂ ಮಾಡಕೂಡದು.

ದೈವೇ ಚತುರಸ್ರಂ, ಪಿತ್ರ್ಯೇ ವೃತ್ತಮಂಡಲಂ ।

ವಿಶ್ವೇದೇವರಿಗೆ ಚೌಕಾಕಾರ ಪಿತೃಗಳಿಗೆ ವೃತ್ತಾಕಾರ ಮಂಡಲಗಳನ್ನು ಬರೆಯತಕ್ಕದ್ದು.

## ಭೋಜನಪಾತ್ರೆ ಇಡುವ ಕ್ರಮ

ಸದಂಡಕದಳೀಪತ್ರಂ ವಾಮಭಾಗಾಗ್ರಮಾಯತಂ ।
ಹಸ್ತಪ್ರಮಾಣಂ ಕುರ್ವೀತ ಭೋಜನಾರ್ಥಮಿತೀರಿತಂ ॥

ಮಧ್ಯದ ದಂಡಿನಿಂದ ಸಹಿತವಾದ ಬಾಳೆಲೆಯನ್ನು ಹಸ್ತಪ್ರಮಾಣವಾಗಿ ಎಡಬದಿಗೆ ತುದಿಮಾಡಿ ದೀರ್ಘವಾಗಿ ಇಡತಕ್ಕದ್ದು.

ಪರಿವೇಷಣೇ ಪ್ರಶಸ್ತಂ ಸ್ಯಾತ್ ಭಾರ್ಯಯಾ ಪಿತೃತೃಪ್ತಯೇ ।
ವಿಶ್ವೇದೇವಮನುಷ್ಯಾಣಾಂ ಸ್ತ್ರೀಸಹಾಂಯೋ ಯತಃ ಸ್ಮೃತಃ ॥

ಬ್ರಾಹ್ಮಣರಿಗೆ ಪತ್ನಿಯು ಬಡಿಸಿದರೆ ಪಿತೃಗಳಿಗೆ ತೃಪ್ತಿಯಾಗುವುದು. ಯಾಕೆಂದರೆ ಪಿತೃಗಳೂ, ದೇವತೆಗಳೂ, ಮನುಷ್ಯರೂ ಸ್ತ್ರೀ ಸಹಾಯಕರಾಗಿಯೇ ಇರುತ್ತಾರಷ್ಟೆ.

**ಹಸದತ್ತಂ ತು ನಾಶ್ನೀಯಾತ್ ಲವಣಂ ವ್ಯಂಜನಾದಿಕಂ ।**
**ಅಪಕ್ವಂ ತೈಲಪಕ್ವಂ ಚ ಹಸ್ತೇನೈವ ಪ್ರದೀಯತೇ ॥**

ಉಪ್ಪು, ಮೇಲೋಗರ, ತೈಲ ಮೊದಲಾದ್ದನ್ನು ಕೈಯಿಂದ ಬಡಿಸಿದರೆ ತಿನ್ನಬಾರದು. ಹಸಿ ಪದಾರ್ಥ, ತೈಲಪಕ್ವ ಇವುಗಳನ್ನು ಕೈಯಿಂದಲೇ ಬಡಿಸುವುದು.

**ಪ್ರಾಧಾನ್ಯಂ ಪಿಂಡದಾನಸ್ಯ ಭೋಜನಸ್ಯ ತದಂಗತಾ ।**
**ಅತೋ ಭುಕ್ತಿಕ್ರಿಯಾಹಾನೌ ಶ್ರಾದ್ಧವೃತ್ತಿಂ ಸಮನ್ಸತೇ ॥**

ಶ್ರಾದ್ಧದಲ್ಲಿ ಪಿಂಡದಾನವು ಪ್ರಧಾನ ಭಾಗವಾಗಿದ್ದು ಭೋಜನವು ಅಂಗವಾದುದರಿಂದ ಪಿಂಡದಾನದಿಂದ ಮೊದಲು ಭೋಜನವಿರುವುದರಿಂದ ಆ ಕಾಲದಲ್ಲಿ ವಾಂತಿ ಯಾ ವಿಘ್ನವಾದರೆ ಶ್ರಾದ್ಧವು ಕೆಡುವುದು. ಪಿಂಡದಾನಾನಂತರದಲ್ಲಿ ವಾಂತಿಯಾದರೆ ಪ್ರಾಯಶ್ಚಿತ್ತದಿಂದ ಶ್ರಾದ್ಧವು ಪೂರ್ತಿಯಾಗುವುದು.

## ಭೋಜನ ನಿಯಮ

ನಾನ್ನಪಾನಾದಿಕಂ ಶ್ರಾದ್ಧೇ ವಾರಯೇನ್ಮುಖತಃ ಕ್ವಚಿತ್ ।
ಅನಿಷ್ಟತ್ವಾದ್ಬಹುತ್ವಾದ್ವಾ ವಾರಣಂ ಹಸ್ತಸಂಜ್ಞಯಾ ॥

ಭೋಜನಕಾಲದಲ್ಲಿ ಅನ್ನ, ಪಾನ; ಶಾಕ, ಪಾಕ ಇತ್ಯಾದಿಗಳನ್ನು ಬೇಡವೆಂದು ಬಾಯಿಯಿಂದ ಹೇಳಕೂಡದು. ಹಸ್ತಸಂಜ್ಞೆಯಿಂದಲೇ ತಿಳಿಸತಕ್ಕದ್ದು.

**ಭೋಜನಂ ತು ನ ನಿಶ್ಶೇಷಂ ಕುರ್ಯಾತ್ಪ್ರಾಜ್ಞಃ ಕಥಂಚನ ।**
**ಅನ್ಯತ್ರ ದಧ್ನ ಕ್ಷೀರಾದ್ವಾ ಕ್ಷೌದ್ರಾತ್ಸಕ್ತುಭ್ಯ ಏವ ಚ ॥**

ಭೋಜನದಲ್ಲಿ ಮೊಸರು, ಹಾಲು, ತುಪ್ಪ, ಜೇನು, ಪಾಯಸ, ಕಜ್ಜಾಯ ಇವುಗಳ ಹೊರತಾಗಿ ಉಳಿದವುಗಳನ್ನು ಸಂಪೂರ್ಣವಾಗಿ ಭುಂಜಿಸಬಾರದು.

## ಪಿಂಡಪ್ರಮಾಣ

**ಏಕೋದ್ದಿಷ್ಟೇ ಸಪಿಂಡೇ ಚ ಕಪಿತ್ಥಂ ತು ವಿಧೀಯತೇ ।**
**ನಾರಿಕೇಳಪ್ರಮಾಣಂ ತು ಪ್ರತ್ಯಬ್ದೇ ಮಾಸಿಕೇ ತಥಾ ॥**

ತೀರ್ಥೇ ದರ್ಶೇ ಚ ಸಂಪ್ರಾಪ್ತೇ ಕುಕ್ಕುಟಾಂಡಪ್ರಮಾಣತಃ ।
ಮಹಾಲಯೇ ಗಯಾಶ್ರಾದ್ಧೇ ಕುರ್ಯಾದಾಮಲಕೋಪಮಂ ॥
ಪ್ರೇತಪಿಂಡಸ್ತು ದೈರ್ಘ್ಯೇಣ ದ್ವಾದಶಾಂಗುಲ ಉಚ್ಯತೇ ।

ಏಕೋದ್ದಿಷ್ಟ ಹಾಗೂ ಸಪಿಂಡೀಕರಣಗಳಲ್ಲಿ ಕಪಿತ್ಥಫಲಪ್ರಮಾಣದ ಪಿಂಡವನ್ನೂ ಪ್ರತಿ ಸಾಂವತ್ಸರಿಕ ಹಾಗೂ ಮಾಸಿಕದಲ್ಲಿ ಸುಲಿದ ತೆಂಗಿಕಾಯಿಯ ಪ್ರಮಾಣದ ಪಿಂಡಗಳನ್ನೂ ತೀರ್ಥ ಮತ್ತು ದರ್ಶ ಶ್ರಾದ್ಧದಲ್ಲಿ ಕೋಳಿಮೊಟ್ಟೆ ಪ್ರಮಾಣದ ಪಿಂಡಗಳನ್ನೂ ಮಹಾಲಯ ಗಯಾ ಶ್ರಾದ್ಧಗಳಲ್ಲಿ ನೆಲ್ಲಿಕಾಯಿ ಪ್ರಮಾಣದ ಪಿಂಡಗಳನ್ನೂ ಮಾಡತಕ್ಕದ್ದು. ಸಪಿಂಡೀಕರಣದಲ್ಲಿ ಪ್ರೇತಪಿಂಡವು 12 ಅಂಗುಲ ಉದ್ದವಿರಬೇಕು.

## ಶ್ರಾದ್ಧಾಂಗ ತಿಲತರ್ಪಣ

ಪರೇದ್ಯುಃ ಶ್ರಾದ್ಧಕೃನ್ಮರ್ತ್ಯೋ ಯೋ ನ ತರ್ಪಯತೇ ಪಿತೄನ್ ।
ತಸ್ಯ ತೇ ಪಿತರಃ ಕ್ರುದ್ಧಾಃ ಶಾಪಂ ದತ್ವಾ ವ್ರಜಂತಿ ಹಿ ॥

ಶ್ರಾದ್ಧಕರ್ತನು ಮಾರನೇ ದಿನ ಪಿತೃತರ್ಪಣ ಮಾಡದಿದ್ದರೆ ಅವನ ಮೇಲೆ ಪಿತೃಗಳು ಕೋಪಗೊಂಡು ಶಾಪವನ್ನು ಕೊಟ್ಟು ಹೋಗುವರು.

## ಪವಿತ್ರಕ್ಕೆ ದರ್ಭಸಂಖ್ಯೆ

ಪಂಚಭಿಃ ಪೌಷ್ಟಿಕೇ ಚೈವ ಚತುರ್ಭಿಃ ಯಜ್ಞಕರ್ಮಣಿ ।
ಪಿತೃಯಜ್ಞೇ ತ್ರಿಭಿರ್ದರ್ಭೈಃ ದ್ವೌ ದರ್ಭೌ ನಿತ್ಯಕರ್ಮಣಿ ॥

ಶಾಂತಿ ಮತ್ತು ಪೌಷ್ಟಿಕ ಕರ್ಮಗಳಲ್ಲಿ ಐದು ದರ್ಭೆಗಳಿಂದಲೂ ಯಜ್ಞದಲ್ಲಿ ನಾಲ್ಕು ದರ್ಭೆಗಳಿಂದಲೂ ಶ್ರಾದ್ಧದಲ್ಲಿ ಮೂರು ದರ್ಭೆಗಳಿಂದಲೂ ನಿತ್ಯಕರ್ಮಗಳಲ್ಲಿ ಎರಡು ದರ್ಭೆಗಳಿಂದಲೂ ಪವಿತ್ರವನ್ನು ಮಾಡತಕ್ಕದ್ದು.

ಆಮಂತ್ರ್ಯ ಬ್ರಾಹ್ಮಣಂ ಯಸ್ತು ಯಥಾನ್ಯಾಯಂ ನ ಪೂಜಯೇತ್ ।
ಅತಿಕೃಚ್ಛ್ರಾಸು ಘೋರಾಸು ತಿರ್ಯಗ್ಯೋನಿಷು ಜಾಯತೇ ॥

ಯಾವಾತನು ಬ್ರಾಹ್ಮಣರನ್ನು ಆಮಂತ್ರಿಸಿ ಯಥಾಯೋಗ್ಯವಾಗಿ ಪೂಜಿಸುವುದಿಲ್ಲವೋ ಅವನು ಘೋರತರವಾದ, ಕಷ್ಟವಾದ ತಿರ್ಯಗ್ಯೋನಿಗಳಲ್ಲಿ ಜನಿಸುವನು.

## ಪಾಕಕರಣ

ಸಮಾನಪ್ರವರೈಃ ಮಿತ್ರೈಃ ಸಪಿಂಡೈಶ್ಚ ಗುಣಾನ್ವಿತೈಃ ।
ಕೃತೋಪಕಾರಿಭಿಶ್ಚೈವ ಪಾಕಕಾರ್ಯಂ ಪ್ರಶಂಸ್ಯತೇ ॥

ಸಮಾನಪ್ರವರ ಉಳ್ಳವರು, ಮಿತ್ರರು, ಗುಣಯುಕ್ತರಾದ ಸಪಿಂಡರು, ಉಪಕಾರ ಮಾಡಿದವರು ಇವರಿಂದ ಮಾಡಲ್ಪಟ್ಟ ಅಡಿಗೆಯು ಶ್ರಾದ್ಧಕ್ಕೆ ಪ್ರಶಸ್ತವಾಗಿದೆ.

| | | | |
|---|---|---|---|
| ಪ್ರತಿ ಸಾಂವತ್ಸರಿಕ ಶ್ರಾದ್ಧ ಸಂಕಲ್ಪಕ್ಕೆ ದರ್ಭೆ | | | 64 |
| ಮಾಸಿಕ ಶ್ರಾದ್ಧ | ,, | ,, | 16 |
| ಆಬ್ದಿಕ ಶ್ರಾದ್ಧ | ,, | ,, | 16 |
| ಬಲಿಗೆ ದರ್ಭೆ | ,, | ,, | 16 |
| ಜಲಕೂರ್ಚೆಗೆ ದರ್ಭೆ | ,, | ,, | 12 |
| ಮಹಾಲಯಶ್ರಾದ್ಧ | ,, | ,, | 108 |
| ಪವಿತ್ರಕ್ಕೆ | ,, | ,, | 3 |
| ಅರ್ಘ್ಯಕೂರ್ಚೆ | ,, | ,, | 2+3 |

## ಮಾಸಿಕ ಶ್ರಾದ್ಧ ವಿಚಾರ

ಜೀವನು ಮೃತಪಟ್ಟ ದಿನದಿಂದ 21 ನೇ ದಿನ ಒಂದನೇ ಮಾಸಿಕ.

27 ದಿನ 2 ನೇ ಮಾಸಿಕ

ಪ್ರತಿ ಮಾಸದಲ್ಲಿಯೂ ಮೃತತಿಥಿಯಲ್ಲಿ ಮಾಸಿಕ ಶ್ರಾದ್ಧ.

41 ನೇ ದಿನ 4 ನೇ ಮಾಸಿಕ.

171 ನೇ ದಿನ 9 ನೇ ಮಾಸಿಕ $5^1/_2$ ಮಾಸ.

346 ಅರೆಮಾಸಿಕ.

ಸೌರಮಾನ ಮಾಸದ ಯಾವ ಪಕ್ಷದಲ್ಲಿ ಮೃತ ತಿಥಿ ಅಪರಾಹ್ಣ ವ್ಯಾಪ್ತಿ ಇದೆಯೋ ಅದೇ ದಿವಸ ವರ್ಷಾಂತ (ಪ್ರಥಮಾಬ್ದಿಕ) ಶ್ರಾದ್ಧವಾಗಬೇಕು.

361 ನೇ ಪತಂಗ (ಪಿತೃಸಂಗಮ) ಶ್ರಾದ್ಧ ಮಾಡಬೇಕು.

ಬೋಧಾಯನಾಚಾರ್ಯರ ಸೂತ್ರದಲ್ಲಿ ಒಂದು ಪಿಂಡದ ಶ್ರಾದ್ಧವು ಇರುವುದಿಲ್ಲವಾದ್ದರಿಂದ ಏಕಪಿಂಡಶ್ರಾದ್ಧವು ಶಾಸ್ತ್ರಗ್ರಾಹ್ಯವಲ್ಲ. ಇದು ರೂಢಿಯಲ್ಲಿ ಕೆಲವು ಕಡೆಯಲ್ಲಿ ಮಾತ್ರ ಗೋಚರಿಸುತ್ತದೆ. ಅದರ ಕ್ರಮ ವಿವರಗಳನ್ನು ಪ್ರಯೋಗದಲ್ಲಿ ಒಟ್ಟಿಗೆ ಕೊಡಲಾಗಿದೆ.

ಸಂಕಲ್ಪ ವಿಧಾನವನ್ನು ಮಾಡಿ ಅರ್ಚನೆಗಳು ಒಂದೇ ರೀತಿಯವು. ಅರ್ಘ್ಯಪಾತ್ರವಿಲ್ಲ, ಪಚನಾಗ್ನಿ ಇಲ್ಲ, ವಿಕಿರ ಪಿಂಡವಿಲ್ಲ. ಹೊಸ್ತಿಲಿನಲ್ಲಿ ಎಲೆ ಅಡಿಕೆ ಇಟ್ಟು ವಾಸ್ತು ಪೂಜೆ ಮಾಡಿ ಗದಾಧರನನ್ನು ಪೂಜಿಸಬೇಕು. ಪಂಚೋಪಚಾರವಿಲ್ಲ. ಸ್ವಧೆ ವಿಚಾರವೂ ಇಲ್ಲ. ಇತರ ಎಲ್ಲಾ ಕ್ರಮಗಳು ಸಮಾನವಾಗಿರುತ್ತವೆ.

ಮಾಸಿಕ ಶ್ರಾದ್ಧವು 16 ಬಂದಲ್ಲಿ ವರ್ಷಾಂತ ಶ್ರಾದ್ಧದಿಂದ 6 ನೇ ದಿನಕ್ಕೆ ಪತಂಗಶ್ರಾದ್ಧ ಮಾಡಬೇಕು. (ತದುಪರಿ ಷಷ್ಠೇಹನಿ)

17 ಮಾಸಿಕ ಬಂದಲ್ಲಿ ಮಾರನೇ ದಿನ ಮಾಡಬೇಕು.




**ವಿ. ಸೂ :-** ಮೂರು ಪಿಂಡಗಳ ಶ್ರಾದ್ಧವನ್ನು ಅನುಸರಿಸುವವರು ಈ ಮೇಲಿನ ಕ್ರಮದಂತೆ ಬ್ರಾಹ್ಮಣರನ್ನು ನಿಮಂತ್ರಿಸುವುದು ಅಥವಾ ಆಚರಿಸುವುದು.

ಅಥವಾ

ಶ್ರಾದ್ಧರಕ್ಷಕನನ್ನು ಮಹಾವಿಷ್ಣುವಿನಲ್ಲೇ ಅರ್ಚಿಸಿ ವಿಶ್ವೇದೇವರಿಗೆ ಒಬ್ಬ, ಬ್ರಾಹ್ಮಣ ಪಿತೃಗಳಿಗೆ ಒಬ್ಬ ಬ್ರಾಹ್ಮಣನಂತೆ ಅರ್ಚಿಸುವುದು. ಒಂದು ಪಿಂಡ ಕ್ರಮದಲ್ಲಿ ಶ್ರಾದ್ಧವನ್ನು ಮಾಡುವವರು ಹಿಂದೆ ಹೇಳಿದಂತೆ ಒಬ್ಬೊಬ್ಬ ಬ್ರಾಹ್ಮಣನಂತೆ. ಅರ್ಘ್ಯಪಾತ್ರೆಗಳಿಲ್ಲ, ವಿಕಿರಪಿಂಡವಿಲ್ಲ, ಪಚನಾಗ್ನಿ ಹೋಮವಿಲ್ಲ.

ॐ

# ಬೋಧಾಯನೋಕ್ತ ಶ್ರಾದ್ಧಪ್ರಯೋಗಃ

ಗುರುಂ ಗಣಪತಿಂ ಚೈವ ನತ್ವಾ ಲೋಕಹಿತಾಯ ಚ ।
ಬೋಧಾಯನೋದಿತಶ್ರಾದ್ಧಪ್ರಯೋಗೋ ಲಿಖ್ಯತೇಽಧುನಾ ॥

ತತ್ರ ಕರ್ತಾ ಪೂರ್ವೇದ್ಯುಃ ಏಕಭುಕ್ತಂ ಕೃತ್ವಾ ಪರೇದ್ಯುಃ ಪ್ರಾತಃ ಸ್ನಾನಾದಿ ನಿತ್ಯಕರ್ಮ ಕೃತ್ವಾ ದರ್ಭತಿಲಾಕ್ಷತಾಜ್ಯಾದಿಸಂಭಾರಾನ್ ಸಂಭೃತ್ಯ ಮಾಧ್ಯಾಹ್ನಿಕಂ ಕೃತ್ವಾ ಗೋಪೀಚಂದನೇನ ಊರ್ಧ್ವಪುಂಡ್ರಂ ಕೃತ್ವಾ ಅಕೃತ್ವಾ ವಾ ಬ್ರಾಹ್ಮಣಾನಾಹೂಯ । ಆಚಮ್ಯ ।

ಓಂ ಪವಿತ್ರವಂತಃ ಪರಿವಾಜಮಾಸತೇ । ಪಿತೈಷಾಂಪ್ರತ್ನೋ ಅಭಿರಕ್ಷತಿ ವ್ರತಂ । ಮಹಃ ಸಮುದ್ರಂ ವರುಣಸ್ತಿರೋದಧೇ । ಧೀರಾ ಇಚ್ಛೇಕುರ್ಧರುಣೇಷ್ವಾರಭಂ ।

ಈ ಮಂತ್ರದಿಂದ ಬಲಗೈಯಲ್ಲಿ ಪವಿತ್ರವನ್ನು ಧರಿಸಬೇಕು.

ಓಂ ಹ್ರೀಂ ಪರಮಾತ್ಮಾದ್ಯಶೇಷ ಗುರುಪಾರಂಪರ್ಯಕ್ರಮೇಣ ಸ್ವಗುರು ಪಾದಾಂಬುಜಂ ಯಾವತ್ತಾವತ್ ಪ್ರಣೌಮಿ ।

ಆಸನ ಮಂತ್ರಸ್ಯ ಪೃಥಿವ್ಯಾಃ ಮೇರುಪೃಷ್ಠಃ ಋಷಿಃ ಸುತಲಂ ಛಂದಃ ಕೂರ್ಮೋ ದೇವತಾ। ಆಧಾರಶಕ್ತಿ ಕಮಲಾಸನಾಯ ನಮಃ ಆಸನೇ ವಿನಿಯೋಗಃ

ಪೃಥ್ವಿ ತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ ।
ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಂ ॥

ಕೂರ್ಮಾಸನಾಯ ನಮಃ ।

ಅಪಸರ್ಪಂತು ತೇ ಭೂತಾ ಯೇ ಭೂತಾ ಭೂಮಿಸಂಸ್ಥಿತಾಃ ।
ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥
ತೀಕ್ಷ್ಣ ದಂಷ್ಟ್ರ ಮಹಾಕಾಯ ಕಲ್ಪಾಂತದಹನೋಪಮ ।
ಭೈರವಾಯ ನಮಸ್ತುಭ್ಯಮನುಜ್ಞಾಂ ದಾತುಮರ್ಹಸಿ ॥
ಅಪಕ್ರಾಮಂತು ಭೂತಾದ್ಯಾಃ ಸರ್ವೇ ತೇ ಭೂಮಿಭಾರಕಾಃ ।
ಸರ್ವೇಷಾಮವಿರೋಧೇನ ಬ್ರಹ್ಮಕರ್ಮ ಸಮಾರಭೇ ॥

ಓಂ ಕ್ಷಂ ರಂ ಳಂ ಯಂ ಅಸ್ತ್ರಾಯ ಫಟ್ । ಓಂ ಗುಂ ಗುರುಭ್ಯೋ ನಮಃ । ಓಂ ಗಂ ಗಣಪತಯೇ ನಮಃ । ಓಂ ದುಂ ದುರ್ಗಾಯೈ ನಮಃ । ಓಂ ಕ್ಷಂ ಕ್ಷೇತ್ರಪಾಲಾಯ ನಮಃ । ಓಂ ಸಂ ಸರಸ್ವತ್ಯೈ ನಮಃ । ಓಂ ಪಂ ಪರಮಾತ್ಮನೇ ನಮಃ । ಓಂ ವೇದವ್ಯಾಸಾಯ ನಮಃ। ಓಂ ಇಷ್ಟದೇವತಾಭ್ಯೋ ನಮಃ ।

ಪ್ರಣವಸ್ಯ ಪರಬ್ರಹ್ಮ ಋಷಿಃ ದೈವೀ ಗಾಯತ್ರೀ ಛಂದಃ ಪರಬ್ರಹ್ಮ ಪರಮಾತ್ಮಾದೇವತಾ । ಪ್ರಾಣಾಯಾಮೇ ವಿನಿಯೋಗಃ ।

ಓಂ ಭೂಃ ಓಂ ಭುವಃ ಓಂ ಸುವಃ ಓಂ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ ।

ಓಂ ಭೂರ್ಭುವಸ್ಸುವಃ । ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ।

ಓಮಾಪೋಜ್ಯೋತೀರಸೋಮೃತಂ ಬ್ರಹ್ಮಭೂರ್ಭುವಸ್ಸುವರೋಂ ।

ಈ ಮಂತ್ರದಿಂದ ಪ್ರಾಣಾಯಾಮ ಮಾಡಬೇಕು.

ಓಂ ನಮೋ ನಾರಾಯಣಾಯ । ಗಂಗಾದ್ಯಾಃ ಸರ್ವೇ ತೀರ್ಥಾಃ ಸನ್ನಿಹಿತಾಃ ಸಂತು । ಶ್ರೀ ಗಂಗೇ ಶ್ರೀ ಭಾಗೀರಥಿ ।

ಓಂ ತಚ್ಛಂಯೋರಾವೃಣೀ ಮಹೇ । ಗಾತುಂ ಯಜ್ಞಾಯ । ಗಾತುಂ ಯಜ್ಞಪತಯೇ । ದೈವೀ ಸ್ವಸ್ತಿ ರಸ್ತುನಃ । ಸ್ವಸ್ತಿರ್ಮಾನುಷೇಭ್ಯಃ ಊರ್ಧ್ವಂಜಿ ಗಾತು ಭೇಷಜಂ । ಶಂನ್ನೋ ಅಸ್ತು ದ್ವಿಪದೇ । ಶಂ ಚತುಷ್ಪದೇ । ಓಂ ಶಾಂತಿಃ ಶಾಂತಿಃ ಶಾಂತಿಃ । ಆತ್ಮಶರೀರ ಶುದ್ಧಿರಸ್ತು ।

ಈ ಮಂತ್ರದಿಂದ ಗಂಧಾಕ್ಷತೆಗಳನ್ನು ಜಲಸಮೇತವಾಗಿ ಎಡಕೈಯಲ್ಲಿರಿಸಿ ತುಲಸಿಯಿಂದ ಶರೀರಕ್ಕೆ ಪ್ರೋಕ್ಷಿಸಿಕೊಳ್ಳಬೇಕು.

## ಕಲಶಾರ್ಚನಂ ಕರಿಷ್ಯೇ

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥

ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಥ ಯಜುರ್ವೇದಸ್ಸಾಮವೇದೋಹ್ಯಥರ್ವಣಃ ॥
ಅಂಗೈಶ್ಚ ಸಹಿತಾಃ ಸರ್ವೇ ಕಲಶಂ ತು ಸಮಾಶ್ರಿತಾಃ ।
ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟಿಕರೀ ತಥಾ ॥
ಆಯಾಂತು ಮಮ ದೇಹಸ್ಯ ದುರಿತಕ್ಷಯಕಾರಕಾಃ ।
ಸರ್ವೇ ಸಮುದ್ರಾಃ ಸರಿತಃ ತೀರ್ಥಾನಿ ಜಲದಾ ನದಾಃ ॥
ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು ॥

ಕಲಶದೇವತಾಭ್ಯೋ ನಮಃ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಾಸ್ಸಮರ್ಪಯಾಮಿ ।

ಈ ಮಂತ್ರದಿಂದ ಗಂಧಾಕ್ಷತೆ ಹೂಗಳಿಂದ ಜಲಪಾತ್ರವನ್ನು ಪೂಜಿಸಬೇಕು.

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ ॥

ಓಂ ಸ್ವಸ್ತಿ ಶ್ರೀಕೃಷ್ಣ ಕೃಷ್ಣಾದ್ಯ ಭಗವತೋ ಮಹಾಪುರುಷಸ್ಯ ವಾಸುದೇವಸ್ಯ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣೋ ದ್ವಿತೀಯ ಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭಾರತವರ್ಷೇ ಭರತಖಂಡೇ ಮೇರೋರ್ದಕ್ಷಿಣಪಾರ್ಶ್ವೇ ಗೋರಾಷ್ಟ್ರದೇಶೇ ಗೋಕರ್ಣಮಂಡಲೇ ಪರಶುರಾಮಕ್ಷೇತ್ರೇ ಶಾಲಿವಾಹನ ಶಕಾಬ್ದೇ ಬೌದ್ಧಾವತಾರೇ ಅಸ್ಮಿನ್ ವರ್ತಮಾನ ವ್ಯಾವಹಾರಿಕೇ ಪ್ರಜಾಪತಿನಾಮ ಸಂವತ್ಸರೇ ದಕ್ಷಿಣಾಯನೇ ವರ್ಷಋತೌ ಶ್ರಾವಣಮಾಸೇ ಕೃಷ್ಣಪಕ್ಷೇ ದ್ವಾದಶ್ಯಾಂ ತಿಥೌ ಗುರುವಾಸರಯುಕ್ತಾಯಾಂ ಶುಭಯೋಗ ಶುಭಕರಣ ಶುಭವಾರ ಶುಭತಿಥಿ ಶುಭನಕ್ಷತ್ರ ಯುಕ್ತಾಯಾಂ ಏವಂ ಗುಣ ವಿಶೇಷಣವಿಶಿಷ್ಟಾಯಾಂ ಶುಭತಿಥೌ (ಪುಣ್ಯತಿಥೌ) ಅಸ್ಮತ್ ಪಿತುಃ ಮಾತುಃ ಪ್ರತಿ ಸಾಂವತ್ಸರಿಕಶ್ರಾದ್ಧಂ ಕರ್ತುಂ ಮಮ ಶರೀರಶುದ್ಧ್ಯರ್ಥಂ ಸ್ನಾನ ಪವನ ಮಂತ್ರಾಚಮನ ಮಂತ್ರ ಪ್ರೋಕ್ಷಣಾನಿ ಕರಿಷ್ಯೇ ॥

ಹೀಗೆ ಸಂಕಲ್ಪಿಸಿ ಗಂಧಾಕ್ಷತೆಗಳನ್ನು ಜಲಸಹಿತವಾಗಿ ಕೆಳಕ್ಕೆ ಬಿಡಬೇಕು. ಸಂಕಲ್ಪ ವಾಕ್ಯದಲ್ಲಿ ಸಂವತ್ಸರ ಅಯನಾದಿಗಳನ್ನು ಆಯಾಯ ದಿನಗಳಿಗೆ ಹೊಂದುವಂತೆ ಹೇಳಬೇಕು.

ಈ ಕೆಳಗಿನ ಮಂತ್ರಗಳಿಂದ ಶರೀರಕ್ಕೆ ನವಮಾರ್ಜನೆಗಳು.

ಭುವಿ ಮೂರ್ಧ್ನಿ ತಥಾಕಾಶೇ ಮೂರ್ಧ್ನ್ಯಾಕಾಶೇ ತಥಾ ಭುವಿ ।
ಆಕಾಶೇ ಭುವಿ ಮೂರ್ಧ್ನಿಸ್ಸ್ಯಾನ್ನವಮಾರ್ಜನಲಕ್ಷಣಂ ॥

ಓಂ ಆಪೋ ಹಿ ಷ್ಠಾ ಮಯೋ ಭುವಸ್ತಾನ ಊರ್ಜೇ ದಧಾತನ। ಮಹೇರಣಾಯ ಚಕ್ಷಸೇ। ಯೋವಶ್ಶಿವತಮೋ ರಸಸ್ತಸ್ಯ ಭಾಜಯತೇ ಹನಃ। ಉಶತೀರಿವ ಮಾತರಃ। ತಸ್ಮಾ ಅರಂ ಗಮಾಮವೋ ಯಸ್ಯ ಕ್ಷಯಾಯ ಜಿನ್ವಥ। ಆಪೋಜನಯಥಾಚನಃ।

ಈ ಮಂತ್ರವನ್ನು ಮೂರು ಬಾರಿ ಹೇಳುತ್ತಾ ನೀರಿನಿಂದ ಶರೀರವನ್ನು ಪ್ರೋಕ್ಷಿಸಬೇಕು.

**ಅಥ ಪವನಂ**

ಏಕವಿಂಶತಿ ದರ್ಭಪುಂಜೀಲಾನ್ ತ್ರೇಧಾ ವಿಭಜ್ಯ ಪ್ರಥಮಭಾಗಂ ಗೃಹೀತ್ವಾ ।
ಇಪ್ಪತ್ತೊಂದು ದರ್ಭೆಗಳನ್ನು ಮೂರು ಭಾಗ ಮಾಡಿ ಒಂದು ಭಾಗವನ್ನು ಹಿಡಿದು,

ಓಂ ಭೂಃ ಚಿತ್ಪತಿಸ್ತ್ವಾ ಪುನಾತು ।

ಎರಡು ಕೈಗಳಿಂದ ಮುಖದಿಂದ ಶಿರಸ್ಸಿನ ತನಕ 3 ಸಲ ಉಜ್ಜಬೇಕು.

ಓಂ ಭುವಃ ವಾಕ್ಪತಿಸ್ತ್ವಾ ಪುನಾತು ।

ಎರಡನೇ ಭಾಗದಿಂದ ನಾಭಿಯಿಂದ ಮುಖದ ತನಕ.

ಓಂ ಸುವಃ ದೇವಸ್ತ್ವಾಸವಿತಾ ಪುನಾತು ।

ಮೂರನೇ ಭಾಗದಿಂದ ನಾಭಿಯಿಂದ ಕೆಳಗೆ ಪಾದದ ತನಕ ಉಜ್ಜಬೇಕು.

ತಾನ್ ದರ್ಭಾನದ್ಭಿರಭ್ಯುಕ್ಷ್ಯ ಉದಙ್ನಿರಸ್ಯ ಅಪಉಪಸ್ಪೃಶ್ಯ ।
ಈ ಉಜ್ಜಿದ ಎಲ್ಲಾ ದರ್ಭೆಗಳನ್ನು ನೀರು ಹಾಕಿ ಎಡಬದಿಗೆ ಹಾಕಿ ಕೈ ತೊಳೆದು ಮಂತ್ರಾಚಮನ ಮಾಡಬೇಕು.

**ಅಥ ಮಂತ್ರಾಚಮನಂ ।**

ಓಂ ಆಪೋ ಹಿ ಷ್ಠಾ ಮಯೋ ಭುವಸ್ತಾನ ಊರ್ಜೇ ದಧಾತನ । ಮಹೇರಣಾಯ ಚಕ್ಷಸೇ ಸ್ವಾಹಾ । ಯೋವಶ್ಶಿವತಮೋ ರಸಸ್ತಸ್ಯ ಭಾಜಯತೇ ಹನಃ । ಉಶತೀರಿವ ಮಾತರಃ ಸ್ವಾಹಾ । ತಸ್ಮಾ ಅರಂ ಗಮಾಮವೋ ಯಸ್ಯ ಕ್ಷಯಾಯ ಜಿನ್ವಥ । ಆಪೋಜನಯಥಾಚನ ಸ್ವಾಹಾ ।

ಹೀಗೆ ಮೂರು ಸಲ ನೀರು ಅಭಿಮಂತ್ರಿಸಿ ಆಚಮನ ಮಾಡಬೇಕು.

ಅಂಗುಷ್ಠಮೂಲೇನ ವ್ಯಾಹೃತಿಭಿಃ ಮುಖಂ ತ್ರಿಃ ಪರಿಮೃಜ್ಯ ।ಸವ್ಯಂ ಪಾಣಿಂ ಪಾದೌ ಪ್ರೋಕ್ಷ್ಯ । ಅಂಗುಷ್ಠಾನಾಮಿಕಾಭ್ಯಾಂ ಚಕ್ಷುಷೀ । ಅಂಗುಷ್ಠ ತರ್ಜನೀಭ್ಯಾಂ ನಾಸಿಕೇ । ಅಂಗುಷ್ಠಕನಿಷ್ಠಿಕಾಭ್ಯಾಂ ಶ್ರೋತ್ರೇ । ಅಂಗುಷ್ಠ ಮಧ್ಯಮಾಭ್ಯಾಂ ಬಾಹುಮೂಲೇ । ಅಂಗುಷ್ಠೇನ ನಾಭಿಂ । ಪಾಣಿತಲೇನ ಹೃದಯಂ। ಪಂಚಭಿಃ ಶಿರಃ । ಇತಿ ತೂಷ್ಣೀಂ । ಅಥ ದ್ವಿರಾಚಮ್ಯ
ಹೆಬ್ಬೆರಳಿನ ಮೂಲದಿಂದ,

ಓಂ ಭೂರ್ಭುವಸ್ಸುವಃ ।

ಎಂದು ಹೇಳಿ ಮುಖವನ್ನು ಮೂರು ಸಲ ಉಜ್ಜಬೇಕು, ಎಡಗೈ ಮತ್ತು ಪಾದಗಳಿಗೆ ನೀರನ್ನು ಪ್ರೋಕ್ಷಿಸಿ ಮೇಲೆ ಹೇಳಿದಂತೆ ಹಬ್ಬೆರಳಿನಿಂದ ಕಣ್ಣು, ಮೂಗು, ಕಿವಿ, ಭುಜ, ನಾಭಿ, ಹೃದಯ, ಮತ್ತು ತಲೆಯನ್ನು ಸ್ಪರ್ಶ ಮಾಡಿ,
ಅಥ ಮಂತ್ರ ಪ್ರೋಕ್ಷಣಂ । ಈ ಕೆಳಗಿನ ಮಂತ್ರದಿಂದ ಶರೀರಕ್ಕೆ ಪ್ರೋಕ್ಷಣ.

ಓಂ ದಧಿಕ್ರಾವ್ಣ್ಣೋ ಅಕಾರಿಷಂ ಜಿಷ್ಣೋ ರಶ್ವಸ್ಯ ವಾಜಿನಃ । ಸುರಭಿ ನೋ ಮುಖಾ ಕರತ್ಪ್ರಣ ಆಯೂಂಷಿತಾರಿಷತ್ ।

ಓಂ ಆಪೋ ಹಿ ಷ್ಠಾ ಮಯೋ ಭುವಸ್ತಾನ ಊರ್ಜೇ ದಧಾತನ । ಮಹೇರಣಾಯ ಚಕ್ಷಸೇ । ಯೋವಶ್ಶಿವತಮೋ ರಸಸ್ತಸ್ಯ ಭಾಜಯತೇ ಹ ನಃ ।

ಉತತೀರಿವ ಮಾತರಃ । ತಸ್ಮಾ ಅರಂಗಮಾಮವೋ ಯಸ್ಯ ಕ್ಷಯಾಯ ಜಿನ್ವಥ । ಆಪೋಜನಯಥಾಚನಃ ।

ಓಂ ಯಚ್ಚಿದ್ಧಿತೇ ವಿಶೋ ಯಥಾ ಪ್ರದೇವ ವರುಣವ್ರತಂ । ಮಿನೀ ಮಸಿ ದ್ಯವಿ ದ್ಯವಿ । ಯತ್ಕಿಂಚೇದಂ ವರುಣದೈವ್ಯೇ ಜನೇಭಿ ದ್ರೋಹಂ ಮನುಷ್ಯಾಶ್ಚರಾಮಸಿ । ಅಚಿತ್ತೀಯತ್ತವ ಧರ್ಮಾ ಯುಯೋಪಿಮ ಮಾನಸ್ತಸ್ಮಾ ದೇನಸೋ ದೇವ ರೀರಿಷಃ । ಕಿತ ವಾಸೋ ಯದ್ರಿರಿಪುರ್ನದೀವೀ ಯದ್ವಾಘಾ ಸತ್ಯಮುತ ಯನ್ನವಿದ್ಮ । ಸರ್ವಾ ತಾವಿಷ್ಯಶಿಥಿರೇವ ದೇವಾಥಾತೇ ಸ್ಯಾಮ ವರುಣಪ್ರಿಯಾಸಃ ।

ಓಂ ಹಿರಣ್ಯ ವರ್ಣಾಃ ಶುಚಯಃ ಪಾವಕಾ ಯಾ ಸುಜಾತಃ ಕಶ್ಯಪೋ ಯಾಸ್ವಿಂದ್ರಃ । ಅಗ್ನಿಂ ಯಾ ಗರ್ಭಂ ದಧಿರೇ ವಿರೂಪಾಸ್ತಾನ ಆಪ ಶಗ್‌ಂಸ್ಯೋನಾ ಭವಂತು । ಯಾಸಾಗ್‌ಂ ರಾಜಾ ವರುಣೋ ಯಾತಿ ಮಧ್ಯೇ ಸತ್ಯಾನೃತೇ ಅವಪಶ್ಯಂ ಜನಾನಾಂ । ಮಧುಶ್ಚುತಃ ಶ್ಶುಚಯೋ ಯಾಃ ಪಾವಕಾಸ್ತಾನ ಆಪಶ್ಶಗ್‌ಂಸ್ಯೋನಾ ಭವಂತು ।

ಯಾಸಾಂ ದೇವಾದಿವಿ ಕೃಣ್ವಂತಿ ಭಕ್ಷಂ ಯಾ ಅಂತರಿಕ್ಷೇ ಬಹುಧಾ ಭವಂತಿ । ಯಾಃ ಪೃಥಿವೀಂ ಪಯಸೋಂದಂತಿ ಶುಕ್ರಾಸ್ತಾನ ಆಪಶ್ಶಗ್‌ಂ ಸ್ಯೋನಾ ಭವಂತು ।

ಶಿವೇನ ಮಾ ಚಕ್ಷುಷಾ ಪಶ್ಯತಾಪ ಶ್ಶಿವಯಾ ತನುವೋಪ ಸ್ಪೃಷತ ತ್ವಚಂಮೇ। ಸರ್ವಾಗ್ಂ ಅಗ್ನೀಗ್ಂ ರಪ್ಸುಷದೋ ಹುವೇವೋ ಮಯಿವರ್ಚೋ ಬಲಮೋಜೋ ನಿಧತ್ತ ॥

ಪವಮಾನಃ ಸುವರ್ಜನಃ। ಪವಿತ್ರೇಣವಿಚರ್ಷಣಿಃ । ಯಃ ಪೋತಾಸ ಪುನಾತು ಮಾ । ಪುನಂತು ಮಾ ದೇವಜನಾಃ। ಪುನಂತು ಮನವೋ ಧಿಯಾ। ಪುನಂತು ವಿಶ್ವ ಆಯವಃ । ಜಾತವೇದಃ ಪವಿತ್ರವತ್। ಪವಿತ್ರೇಣ ಪುನಾಹಿ ಮಾ। ಶುಕ್ರೇಣ ದೇವದೀದ್ಯತ್। ಅಗ್ನೇ ಕ್ರತ್ವಾಕ್ರತೂಗ್ಂ ರನು। ಯತ್ತೇ ಪವಿತ್ರ ಮರ್ಚಿಷಿ। ಅಗ್ನೇ ವಿತತಮಂತರಾ। ಬ್ರಹ್ಮ ತೇನ ಪುನೀಮಹೇ। ಉಭಾಭ್ಯಾಂ ದೇವಸವಿತಃ । ಪವಿತ್ರೇಣ ಸವೇನ ಚ। ಇದಂ ಬ್ರಹ್ಮ ಪುನೀಮಹೇ॥ ವೈಶ್ವದೇವೀ ಪುನತೀ ದೇವ್ಯಾ ಗಾತ್। ಯಸ್ಯೈ ಬಹ್ವೀಸ್ತನುವೋ ವೀತಪೃಷ್ಠಾಃ। ತಯಾ ಮದಂತಸ್ಸಧ ಮಾದ್ಯೇಷು। ವಯಗ್ಂಸ್ಯಾಮ - ಪತಯೋರಯೀಣಾಂ। ವೈಶ್ವಾನರೋ ರಶ್ಮಿಭಿರ್ಮಾಪುನಾತು । ವಾತಃ ಪ್ರಾಣೇನೇ ಶಿರೋಮಯೋ ಭೂಃ। ದ್ಯಾವಾ ಪೃಥಿವೀ ಪಯಸಾಪಯೋಭಿಃ। ಋತಾವರೀ ಯಜ್ಞಿಯೇ - ಮಾ ಪುನೀತಾಂ। ಬೃಹದ್ಭಿಃ ಸವಿತಸ್ತೃಭಿಃ॥ ವರ್ಷಿಷ್ಠೈರ್ದೇವ ಮನ್ಮಭಿಃ।

ಅಗ್ನೇದಕ್ಷೈಃ ಪುನಾಹಿ ಮಾ । ಯೇನ ದೇವಾ ಅಪುನತ । ಯೇನಾಪೋ ದಿವ್ಯಂ
ಕಶಃ । ತೇನ ದಿವ್ಯೇನ ಬ್ರಹ್ಮಣಾ । ಇದಂ ಬ್ರಹ್ಮ ಪುನೀಮಹೇ ಯಃ ಪಾವಮಾನೀ-
ರಧ್ಯೇತಿ । ಋಷಿಭಿಃ ಸಂಭೃತಗ್‌ಂ ರಸಂ । ಸರ್ವಗ್‌ಂ ಸಪೂತ ಮಶ್ನಾತಿ । ಸ್ವದಿತಂ
ಮಾತರಿಶ್ವನಾ । ಪಾವಮಾನೀರ್ಯೋ ಅಧ್ಯೇತಿ । ಋಷಿಭಿಃ ಸಂಭೃತಗ್‌ಂ ರಸಂ । ತಸ್ಮೈ
ಸರಸ್ವತೀ ದುಹೇ । ಕ್ಷೀರಗ್‌ಂ ಸರ್ಪಿರ್ಮಧೂದಕಂ । ಪಾವಮಾನೀ ಸ್ವಸ್ತ್ಯಯನೀಃ ।
ಸುದುಘಾಹಿ ಪಯಸ್ವತೀಃ । ಋಷಿಭಿಃ ಸಂಭೃತೋರಸಃ । ಬ್ರಾಹ್ಮಣೇಷ್ವಮೃತಗ್‌ಂ
ಹಿತಂ । ಪಾವ ಮಾನೀರ್ದಿಶಂತು ನಃ । ಇಮಂ ಲೋಕ ಮಥೋ ಅಮುಂ । ಕಾಮಾನ್
ಸಮರ್ಧಯಂತು ನಃ । ದೇವೀರ್ದೇವೈಸ್ಸಮಾಭೃತಾಃ । ಪಾವಮಾನೀ ಸ್ವಸ್ತ್ಯಯನೀಃ ।
ಸುದುಘಾಹಿ ಘೃತಶ್ಚುತಃ । ಋಷಿಭಿಃ ಸಂಭೃತೋ ರಸಃ । ಬ್ರಾಹ್ಮಣೇಷ್ವಮೃತಗ್‌ಂ ಹಿತಂ ।
ಯೇನ ದೇವಾಃ ಪವಿತ್ರೇಣ । ಆತ್ಮಾನಂ ಪುನತೇ ಸದಾ । ತೇನ ಸಹಸ್ರಧಾರೇಣ ।
ಪಾವಮಾನ್ಯಃ ಪುನಂತು ಮಾ । ಪ್ರಾಜಾಪತ್ಯಂ ಪವಿತ್ರಂ । ಶತೋದ್ಯಾಮಗುಂಹಿರಣ್ಮಯಂ ।
ತೇನ ಬ್ರಹ್ಮ ವಿದೋವಯಂ । ಪೂತಂ ಬ್ರಹ್ಮ ಪುನೀಮಹೇ । ಇಂದ್ರಸ್ಸುನೀತೀ ಸಹ
ಮಾ ಪುನಾತು । ಸೋಮಸ್ಸ್ವಸ್ತ್ಯಾವರುಣಸ್ಸಮೀಚ್ಯಾ । ಯಮೋ ರಾಜಾ ಪ್ರಮೃಣಾಭಿಃ
ಪುನಾತು ಮಾ । ಜಾತವೇದಾ ಮೋರ್ಜಯಂತ್ಯಾ ಪುನಾತು ।

ಓಂ ಭೂಃ । ಓಂ ಭುವಃ । ಓಂ ಸುವಃ । ಅನೇನ ಸ್ನಾನಪವನ ಮಂತ್ರಾಚಮನಮಂತ್ರಪ್ರೋಕ್ಷಣಕರ್ಮಣಾ ಶ್ರೀ ಪರಮೇಶ್ವರಃ ಪ್ರೀಯತಾಂ ॥ ಓಂ ತತ್ಸತ್ ।

ಇತಿ ದ್ವಾತ್ರಿಂಶಾನ್ಮಾರ್ಜನಾನಿ ಷೋಡಶಸ್ಥಾನೇಷು ಯುಗ್ಮಯುಗ್ಮ ಕ್ರಮೇಣ ಮಾರ್ಜಯೇತ್ । ಅನ್ಯೈಶ್ಚ ಪವಿತ್ರಮಂತ್ರೈಃ ಆತ್ಮಾನಂ ಪ್ರೋಕ್ಷೇತ್ ।
(ಎಳ್ಳು ಮತ್ತು ತುಳಸೀದಳವನ್ನು ಎಡಗೈಯಲ್ಲಿರಿಸಿ ನೀರು ಸೇರಿಸಿ ಬಲತೊಡೆಯ ಮೇಲಿರಿಸಿ ಕೆಳಗಿನ ಶ್ಲೋಕದ ಕೊನೆಯಲ್ಲಿ ತುಳಸೀದಳದಿಂದ ಶರೀರಕ್ಕೆ ಪ್ರೋಕ್ಷಿಸಿಕೊಳ್ಳಬೇಕು. ಇದು ರೂಢಿ.)

ಅಥ ಶಾರೀರಷಟ್ಕಸ್ಯ ಆತ್ಮ ಋಷಿಃ ಪ್ರಕೃತಿಪುರುಷಂ ಛಂದಃ ಸತ್ಯಾತ್ಮಾ ದೇವತಾ। ಮಮಾಂತರ್ಬಹಿಃ ಶರೀರಶುದ್ಧ್ಯರ್ಥೇ ಶಾರೀರಮಂತ್ರಜಪೇ ವಿನಿಯೋಗಃ ।

ಶಾರೀರ ಮಂತಃಕರಣೋಪಘಾತಂ ವಾಚಶ್ಚ ಪಿಷ್ಣುರ್ಭಗವಾನಶೇಷಂ । ಶಮಂ ನಯತ್ವಸ್ತು ಮಮೇಹ ಶರ್ಮ ಪಾಪಾದನಂತೇ ಹೃದಿ ಸನ್ನಿವಿಷ್ಟೇ ।

ಅಂತಶುದ್ಧಿಂ ಬಹಿಶುದ್ಧಿಂ ಶುದ್ಧೋಧರ್ಮಮಯೋಽಚ್ಯುತಃ ।
ಸ ಕರೋತ್ವಮಲೇ ತಸ್ಮಿನ್ ಶುಚಿರೇವಾಸ್ಮಿ ಸರ್ವದಾ ॥
ಬಾಹ್ಯೋಪಘಾತಾನನಘೋ ಬೌದ್ಧಾಂಶ್ಚ ಭಗವಾನಜಃ ।
ಶಮಂ ನಯತ್ವನಂತಾತ್ಮಾ ವಿಷ್ಣುಶ್ಚೇತಸಿ ಸಂಸ್ಥಿತಃ ॥
ಶಾರೀರಂ ಮೇ ಹೃಷೀಕೇಶ ಪುಂಡರೀಕಾಕ್ಷ ಮಾನಸಂ ।
ಪಾಪಂ ಪ್ರಶಮಯಾದ್ಯ ತ್ವಂ ವಾಕ್ಕೃತಂ ಮಮ ಮಾಧವ ॥
ಯದ್ಯಪ್ಯುಪಹತಃ ಪಾಪೈಃ ಯದಿ ವಾತ್ಯಂತ ದುಶ್ಕೃತೈಃ ।
ತಥಾಪಿ ಸಂಸ್ಮರೇದ್ವಿಷ್ಣುಂ ಸರ್ವಪಾಪೈಃ ಪ್ರಮುಚ್ಯತೇ ॥
ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।
ಯಃಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಭ್ಯಂತರಃ ಶುಚಿಃ ಇತಿ ॥
ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥

(ಶ್ರಾದ್ಧಕ್ಕೆ ತಂದಿರಿಸಿದ ನೀರನ್ನು ಹೂ ಮತ್ತು ಗಂಧಗಳಿಂದ ಅರ್ಚಿಸಿರಿ.)

ಸಕುಶಹಿರಣ್ಯಂ ಗೃಹೀತ್ವಾ । ಕನಿಷ್ಠಪೂರ್ವಂ ಬ್ರಾಹ್ಮಣಪ್ರದಕ್ಷಿಣತ್ರಯಂ ಕುರ್ಯಾತ್ ।

ಬಲಗೈಯಲ್ಲಿ ದರ್ಭೆ ಹಿರಣ್ಯ ಮತ್ತು ಜಲಪಾತ್ರೆಯನ್ನು ಹಿಡಿದುಕೊಂಡು ಕನಿಷ್ಠ ಸಹೋದರನನ್ನು ಮುಂದೆ ಮಾಡಿ ನಿಮಂತ್ರಿತ ಬ್ರಾಹ್ಮಣರಿಗೆ ಮೂರು ಪ್ರದಕ್ಷಿಣೆ ಬರುವುದು.

ಓಂ ಸಮಗ್ರಸಂಪತ್ಸಮವಾಪ್ತಿಹೇತವಃ ।
ಸಮುತ್ಥಿತಾಪತ್ಕುಲಧೂಮಕೇತವಃ ॥
ಅಪಾರಸಂಸಾರಸಮುದ್ರಸೇತವಃ ।
ಪುನಂತು ಮಾಂ ಬ್ರಾಹ್ಮಣಪಾದಪಾಂಸವಃ ॥
ಆಪದ್ಘನಧ್ವಾಂತಸಹಸ್ರಭಾನವಃ ।
ಸಮೀಹಿತಾರ್ಥಾರ್ಪಣಕಾಮಧೇನವಃ ॥
ಸಮಸ್ತತೀರ್ಥಾಂಬುಪವಿತ್ರಮೂರ್ತಯೋ ।
ರಕ್ಷಂತು ಮಾಂ ಬ್ರಾಹ್ಮಣಪಾದಪಾಂಸವಃ ॥

ಓಂ ಯಾವತೀರ್ವೈ ದೇವತಾಸ್ತಾಸ್ಸರ್ವಾ ವೇದವಿದಿ ಬ್ರಾಹ್ಮಣೇ ವಸಂತಿ ॥ ತಸ್ಮಾದ್ಬ್ರಾಹ್ಮಣೇಭ್ಯೋ ವೇದವಿದ್ಭ್ಯೋ ದಿವೇ ದಿವೇ ನಮಸ್ಕುರ್ಯಾನ್ನಾಶ್ಲೀಲಂ ॥ ಕೀರ್ತಯೇದೇತಾ ಏವ ದೇವತಾಃ ಪ್ರೀಣಾತಿ ॥

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥

ಇತಿ ಪ್ರದಕ್ಷಿಣತ್ರಯಂ ಕೃತ್ವಾ । ಪ್ರಾಚೀನಾವೀತೀ । ಅಸ್ಮತ್
(ದಕ್ಷಿಣಾಭಿಮುಖವಾಗಿ ನಿಂತು ಜನಿವಾರ ಎಡಕ್ಕೆ ಮಾಡಿರಿ.)

ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧೇ ಮಯ್ಯಾ ಯಥಾ ಶಕ್ತಿ ವಿನಿಹಿತಂ ಬ್ರಹ್ಮದಂಡಂ ಸ್ವೀಕೃತ್ಯ ಪಿತುಃ ಪ್ರತಿಸಾಂವತ್ಸರಿಕಶ್ರಾದ್ಧಂ ಕರ್ತುಂ ಮಮ ಅಧಿಕಾರಸಂಪದಸ್ತ್ವಿತಿ ಭವಂತೋ ಬ್ರುವಂತು ।

(ಈ ರೀತಿ ಯಜಮಾನ ಕೇಳಿದಾಗ)

(ಪ್ರತಿವಚನಂ) ಅಧಿಕಾರಸಂಪದಸ್ತು । ಕೈಯಲ್ಲಿರುವ ಹಿರಣ್ಯಾದಿಗಳನ್ನು ನೀರು ಹಾಕಿ ನೆಲದಲ್ಲಿರಿಸಿರಿ.

ಕಾಲಸ್ತು ಮುಖ್ಯಃ ಕಾಲೋಸ್ತ್ವಿತಿ ಭವಂತೋ ಬ್ರುವಂತು ।
ಮುಖ್ಯಃ ಕಾಲೋಸ್ತು । (ಪ್ರತಿವಚನಂ)
ಯಜ್ಞೋಪವೀತೀ ಜನಿವಾರ (ಬಲಭಾಗಕ್ಕೆ ಮಾಡಿ)
ಆಚಮ್ಯ (ಸಂಕಲ್ಪ ದರ್ಭೆಯನ್ನು ಕೈಯಲ್ಲಿ ಹಿಡಿದುಕೊಳ್ಳಿರಿ)

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥

ವಿಷ್ಣುಯೋಗ ವಿಷ್ಣುಕರಣ ವಿಷ್ಣುವಾರ ವಿಷ್ಣುತಿಥಿ ವಿಷ್ಣುನಕ್ಷತ್ರ ಯುಕ್ತಾಯಾಂ ಏವಂ ಗುಣವಿಶೇಷಣವಿಶಿಷ್ಟಾಯಾಂ ಪುಣ್ಯತಿಥೌ ಪ್ರಾಚೀನಾವೀತೀ ಅಸ್ಮತ್ ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧೇ ಪಿತೃಪಿತಾಮಹ ಪ್ರಪಿತಾಮಹಾನಾಂ (ಮಾತೃಪಿತಾಮಹೀ ಪ್ರಪಿತಾಮಹೀನಾಂ) ಶರ್ಮಣಾಂ (ದಾಯೀನಾಂ) ಗೋತ್ರಣಾಂ ವಸುರುದ್ರಾದಿತ್ಯರೂಪಾಣಾಂ ಯಜ್ಞೋಪವೀತೀ ಪುರೂರವಾರ್ದ್ರವ ಸಂಜ್ಞಕಾನಾಂ ವಿಶ್ವೇಷಾಂ ದೇವನಾಂ ಸವಿಷ್ಣೂನಾಂ ಚಾಕ್ಷಯ್ಯತೃಪ್ತ್ಯರ್ಥಂ ಪ್ರಾಚೀನಾವೀತೀ ಅಸ್ಮತ್ ಪಿತೃಮೃತೇಹನಿ ಸದ್ಯೆವಂ ಪಿತುಃ ಪ್ರತಿಸಾಂವತ್ಸರಿಕ ಶ್ರಾದ್ಧಂ (ಮಾತೃಮೃತೇಹನಿ ಸದ್ಯೆವ ಮಾತುಃ ಪ್ರತಿಸಾಂವತ್ಸರಿಕಶ್ರಾದ್ಧಂ) ಅಗ್ನೌಕರಣಂ ಬ್ರಾಹ್ಮಣಭೋಜನಂ ಪಿಂಡಪ್ರದಾನಂ ಚ ಕರಿಷ್ಯೇ ।

(ದರ್ಭೆ ಕಟ್ಟನ್ನು ದೇವರ ಮಂಡಲದ ಬದಿಯಲ್ಲಿರಿಸಿರಿ.)

(ಅನೇನ ಸಂಕಲ್ಪ ವಿಧಾನೇನ ಅನ್ನದ್ರವ್ಯೇಣ ಪಿತುಃ ಶ್ರಾದ್ಧಂ (ಮಾತುಃ) ಬ್ರಾಹ್ಮಣಭೋಜನಂ ಪಿಂಡಪ್ರದಾನಂ ಕರಿಷ್ಯೇ)

ದೇವತಾಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವ ಚ ।
ನಮಃ ಸ್ವಧಾಯೈ ಸ್ವಾಹಾಯೈ ನಿತ್ಯಮೇವ ನಮೋ ನಮಃ ॥
(ಅಕ್ಷತೆ ಹಾಕಿ ನಮಸ್ಕಾರ ಮಾಡಬೇಕು.)

## ಕ್ಷಣಃ

ಅಥ ಕುಶದ್ವಯಂ ಗೃಹೀತ್ವಾ (ಎರಡು ದರ್ಭೆಗಳನ್ನು ತೆಗೆದುಕೊಂಡು) ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧೇ ಪುರೂರವಾರ್ದ್ರವಸಂಜ್ಞಕಾನಾಂ ವಿಶ್ವೇಷಾಂ ದೇವನಾಗ್ಂ ಸ್ಥಾನೇ ಆಹವನೀಯಾರ್ಥೇ ಕ್ಷಣಃ ಭವದ್ಭಿಃ ಪ್ರಸಾದಃ ಕರ್ತವ್ಯಃ
(ಎಂದು ಹೇಳುತ್ತಾ ವಿಶ್ವೇದೇವರ ಕೈಯಲ್ಲಿ ದರ್ಭೆಯನ್ನು ಕೊಡಬೇಕು.)

ಪ್ರತಿವಚನಂ ಅಸ್ತು ।

ವಿಶ್ವೇದೇವಾಃ ಸನ್ನಿಹಿತಾಸ್ಸಂತು

ಪ್ರಾಚೀನಾವೀತೀ ಸತಿಲಾನ್ ತ್ರಿಗುಣಿತದರ್ಭಾನ್ ಗೃಹೀತ್ವಾ।

(ಎಳ್ಳು ಸಹಿತ ಮೂರು ದರ್ಭೆಗಳನ್ನು ತೆಗೆದುಕೊಂಡು)

**ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧೇ ಪಿತೃಪಿತಾಮಹಪ್ರಪಿತಾಮಹಾನಾಂ ಶರ್ಮಣಾಂ (ಮಾತೃ ಪಿತಾಮಹೀ ಪ್ರಪಿತಾಮಹೀನಾಂ ದಾಯೀನಾಂ) ಗೋತ್ರಾಣಾಂ ವಸುರುದ್ರಾದಿತ್ಯರೂಪಾಣಾಗ್ಂ ಸ್ಥಾನೇ ಆಹವನೀಯಾರ್ಥೇ ಕ್ಷಣಃ ಭವದ್ಭಿಃ ಪ್ರಸಾದಃ ಕರ್ತವ್ಯಃ ।**

(ಎಳ್ಳು ದರ್ಭೆಯನ್ನು ಪಿತೃಗಳ ಕೈಯಲ್ಲಿ ಕೊಡಬೇಕು.)

ಪ್ರತಿವಚನಂ ಅಸ್ತು ।

ಪಿತೃ ಪಿತಾಮಹ ಪ್ರಪಿತಾಮಹಾಶ್ಚ ಸನ್ನಿಹಿತಾಃ ಸಂತು ।

(ಮಾತೃ ಪಿತಾಮಹೀ ಪ್ರಪಿತಾಮಹ್ಯಃ ಸನ್ನಿಹಿತಾಃ ಸಂತು)

ಉಪವೀತೀ ಶ್ರಾದ್ಧರಕ್ಷಕ ಶ್ರೀ ಮಹಾವಿಷ್ಣೋಃ ಸ್ಥಾನೇ ಆಹವನೀಯಾರ್ಥೇ ಕ್ಷಣಃ ಭವದ್ಭಿಃ ಪ್ರಸಾದಃ ಕರ್ತವ್ಯಃ । ವಿಷ್ಣುಃ ಸನ್ನಿಹಿತೋಸ್ತು ।

(ಬ್ರಾಹ್ಮಣಾಭಾವದಲ್ಲಿ ದೇವರ ಬಳಿಯಲ್ಲಿ ದರ್ಭೆಗಳನ್ನು ಇಡಬೇಕು.)

ಅಕ್ರೋಧನ್ಯೈಃ ಶೌಪಚರ್ಯೈಃ ಸತತಂ ಬ್ರಹ್ಮವಾದಿಭಿಃ ।
ಭವಿತವ್ಯಂ ಭವದ್ಭಿಶ್ಚ ಮಯಾ ಚ ಶ್ರಾದ್ಧಕಾರಿಣಾ ॥

ಅಸ್ಮಿನ್ ದೇಶಕಾಲಕ್ಷೇತ್ರಪಾತ್ರ ಹವಿರ್ಗೃಹಸ್ಥಾವಾದಿಷು ಯೋಗ್ಯತಾ ಫಲಸಿದ್ಧಿರಸ್ತ್ವಿತಿ ಭವಂತೋ ಬ್ರುವಂತು ।

ಪ್ರತಿವಚನಂ । ಯೋಗ್ಯತಾಫಲಸಿದ್ಧಿರಸ್ತು ।

ವಿಶ್ವೇದೇವಾ ದ್ವಿಭಾಗಾಶ್ಚ ತ್ರಿಭಾಗಾಃ ಪಿತರಸ್ತಥಾ ।
ಸಭಾಯಾಂ ಸನ್ನಿಧಿರ್ಭೂತ್ವಾ ಮಯಾಚರಿತಕರ್ಮಣಿ ಚ ॥
ಸ್ವೀಕೃತ್ಯ ಸೌಮ್ಯಮೂರ್ತ್ಯಾ ಚ ದೇಶಂ ಕಾಲಂ ತಥೈವ ಚ ।
ಕ್ಷೇತ್ರಂ ಪಾತ್ರಂ ಹವಿಶ್ಚೈವ ಶುದ್ಧಯಿತ್ವಾ ತತಃ ಪರಂ ॥
ಭವದ್ಭಿರಾಘೋಷಯಿತ್ವಾ ಕಲ್ಪನಂ ಚೈವ ಮಾರ್ಗತಃ ।
ಪಾದಪ ಕ್ಷಾಲನಾರ್ಥಾಯ ಆಗಚ್ಛಧ್ವಮಿಹೈವ ಚ ॥

ಪುರೂರವಾರ್ದ್ರವಸಂಜ್ಞಕಾ ವಿಶ್ವೇದೇವಾಃ ಸ್ವಾಗತಮ್ ।
(ವಿಶ್ವೇದೇವರ ಹಸ್ತಕ್ಕೆ ನೀರು ಕೊಡಬೇಕು.)

ಅಸ್ತು (ಪ್ರತಿವಚನಂ)

ಪಿತೃಪಿತಾಮಹಪ್ರಪಿತಾಮಹಾಶ್ಚ ಸ್ವಾಗತಂ
(ಪಿತೃಗಳ ಹಸ್ತಕ್ಕೆ ನೀರು ಕೊಡಬೇಕು.)

ಅಸ್ತು । (ಪ್ರತಿವಚನಂ)

ಪಾದಪ್ರಕ್ಷಾಲನಾರ್ಥಮನುಜ್ಞಾ ।

ತಥಾಸ್ತು (ಪ್ರತಿವಚನಂ)

ತತಃ ಪಾದ್ಯಾರ್ಥಂ ಅರತ್ನಿಮಾತ್ರಾಯಾಮಗರ್ತದ್ವಯಂ ಖಾತ್ವಾ । ದಕ್ಷಿಣಂ ವೃತ್ತಂ ಉತ್ತರಂ ಚತುರಸ್ರಂ ಇತಿ ಮಂಡಲದ್ವಯಂ ಕೃತ್ವಾ ।
(ಸಂಪ್ರದಾಯದಂತೆ ತುಳಸೀಕಟ್ಟೆಯ ಉತ್ತರ ಭಾಗದಲ್ಲಿ ಉತ್ತರಕ್ಕೆ ಚತುರಸ್ರ ಹಾಗೂ ಅಲ್ಲೇ ದಕ್ಷಿಣದಲ್ಲಿ ವೃತ್ತಮಂಡಲಗಳನ್ನು ಸೇಡಿ ಹುಡಿಯಿಂದ ರಚಿಸಿ.)

ಉಪವೀತೀ ಪ್ರಾಙ್ಮುಖಃ ಪಿತುಃ (ಮಾತುಃ) ಪ್ರತಿಸಾಂವತ್ಸರಿಕ ಶ್ರಾದ್ಧೇ ಪುರೂರವಾರ್ದ್ರವ ಸಂಜ್ಞಕಾ ವಿಶ್ವೇದೇವಾಃ ಪಾದ್ಯಸ್ಥಾನಂ ಕಲ್ಪಯಾಮಿ । ಪಾದ್ಯಸ್ಥಾನೇ ಇಮೇ ದರ್ಭಾಃ ।

ದರ್ಭಾಣಾಮುಪರಿ ಶುಭೋದಕಂ । ಇಮಾನಿ ಜಲಗಂಧಾಪುಷ್ಪಾಕ್ಷತಾನಿ ಚತುರಸ್ರಮಂಡಲೇ ನಿಕ್ಷಿಪ್ಯ ।
(ಚತುರಸ್ರ ಮಂಡಲದಲ್ಲಿ ನೀರು ಪ್ರೋಕ್ಷಿಸಿ ಎರಡು ದರ್ಭೆಗಳನ್ನು ಪೂರ್ವಾಗ್ರವಾಗಿರಿಸಿ ಅದರ ಮೇಲೆ ನೀರು ಗಂಧ ಪುಷ್ಪ ಅಕ್ಷತೆಗಳನ್ನು ಇರಿಸುವುದು.)

ಪ್ರಾಚೀನಾವೀತೀ ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧೇ ಪಿತೃಪಿತಾಮಹಪ್ರಪಿತಾಮಹಾಃ (ಮಾತೃಪಿತಾಮಹೀಪ್ರಪಿತಾಮಹ್ಯಃ) ಪಾದ್ಯ ಸ್ಥಾನಂ ಕಲ್ಪಯಾಮಿ । ಪಾದ್ಯಸ್ಥಾನೇ ಇಮೇ ದರ್ಭಾಃ । ದರ್ಭಾಣಾಮುಪರಿ ತಿಲೋದಕಂ ಇಮಾನಿ ತಿಲಜಲಗಂಧದೂರ್ವಾಕುರಾಣಿ ವೃತ್ತಮಂಡಲೇ ನಿಕ್ಷಿಪ್ಯ ।

(ವೃತ್ತಮಂಡಲಕ್ಕೆ ನೀರು ಪ್ರೋಕ್ಷಿಸಿ ಮೂರು ದರ್ಭೆಗಳನ್ನು ದಕ್ಷಿಣಾಗ್ರವಾಗಿ ಇರಿಸಿ ತಿಲೋದಕ ಬಿಟ್ಟು ಎಳ್ಳು ನೀರು ಗಂಧ ಗರಿಕೆಗಳನ್ನು ಹಾಕಬೇಕು.)

ಉಪವೀತೀ । (ವಿಶ್ವೇದೇವರನ್ನು ಆಸನದಲ್ಲಿ ಕುಳಿತುಕೊಳ್ಳಿಸಿ ತಾನು ಪಶ್ಚಿಮಾಭಿಮುಖವಾಗಿ ಎದುರು ಕುಳಿತುಕೊಳ್ಳಬೇಕು.)

ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧೇ ಪುರೂರವಾರ್ದ್ರವ ಸಂಜ್ಞಾ ವಿಶ್ವೇದೇವಾಃ ಸ್ವಾಗತಂ ।
(ವಿಶ್ವೇದೇವರ ಹಸ್ತಕ್ಕೆ ನೀರು ಬಿಡಬೇಕು.)

ಅಸ್ತು (ಪ್ರತಿವಚನಂ)
ಅಕ್ಷತಜಲಂ ಗೃಹೀತ್ವಾ
ವಿಶ್ವೇದೇವಾಃ ಇದಂ ವಃ ಪಾದ್ಯಂ ಇತಿ (ಪಾದಯೋರ್ನಿನೀಯ)
ಅಸ್ತು ಪಾದ್ಯಂ (ಪ್ರತಿವಚನಂ)
(ನೀರು ಸೇರಿಸಿ ಅಕ್ಷತೆಯನ್ನು ವಿಪ್ರನ ಪಾದಕ್ಕೆ ಹಾಕಬೇಕು.)

ವಿಪ್ರಪಾದೌ ಮಂಡಲೇ ಕೃತ್ವಾ ವಿಪ್ರದಕ್ಷಿಣಭಾಗೇ ಪತ್ನೀ ಸ್ಥಿತ್ವಾ ಜಲಂ ದದ್ಯಾತ್।
(ಚತುರಸ್ರ ಮಂಡಲದಲ್ಲಿರಿಸಿದ ವಿಶ್ವೇದೇವರ ಕಾಲುಗಳಿಗೆ ಕರ್ತೃವಿನ ಎಡಭಾಗದಲ್ಲಿ ಯಜಮಾನಿಯು ನಿಂತು ನೀರು ಎರೆಯಬೇಕು.)

ಓಂ ಶನ್ನೋ ದೇವೀ ರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋ ರಭಿಸ್ರವಂತು ನಃ ।

ಇತಿ ದಕ್ಷಿಣಪಾದಪುರಸ್ಸರಂ ಗುಲ್ಫಾದಧಃ ಪ್ರಕ್ಷಾಲ್ಯ
(ಬಲಗಾಲು ಮೊದಲ್ಗೊಂಡು ಗುಲ್ಫದಿಂದ ಕೆಳಗೆ ತೊಳೆಯಬೇಕು.)

ಪಿತೃಮಂಡಲೇ ವಿಪ್ರಾನ್ ಪೂರ್ವಮುಖಾನುಪವೇಶ್ಯ । ಪಿತೃ ಪಿತಾಮಹ ಪ್ರಪಿತಾಮಹಾಃ (ಮಾತೃಪಿತಾಮಹೀ ಪ್ರಪಿತಾಮಹ್ಯಃ) ಸ್ವಾಗತಂ ।
(ಪೂರ್ವಮುಖಮಾಡಿ ಕುಳಿತ ಪಿತೃವಿನ ಹಸ್ತಕ್ಕೆ ನೀರು.)

ಅಸ್ತು (ಪ್ರತಿವಚನಂ)
ಪ್ರಾಚೀನಾವೀತೀ ।
ಇದಂ ವಃ ಪಾದ್ಯಂ । ಅಸ್ತು ಪಾದ್ಯಂ । (ಪ್ರತಿವಚನಂ)
(ಎಳ್ಳು ಸೇರಿಸಿ ಪಾದಕ್ಕೆ ಗಂಧ ಹೂ ಹಾಕಬೇಕು.)

ಓಂ ಶನ್ನೋ ದೇವೀ ರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋ ರಭಿಸ್ರವಂತು ನಃ ।

**ಇತಿ ದಕ್ಷಿಣಪಾದಪುರಸ್ಸರಂ ಗುಲ್ಫಾದಧಃ ಪ್ರಕ್ಷಾಲ್ಯ ।**
(ಮೊದಲಿನಂತೆ ಪಾದ ತೊಳೆಯುವುದು.)

**ಉಪವೀತೀ ವಿಶ್ವೇದೇವಮಂಡಲೇ ವಿಷ್ಣೋಃ ಸ್ವಾಗತಂ ।**
**ವಿಷ್ಣೋರಿದಂ ವಃ ಪಾದ್ಯಂ ।**

**ಓಂ ಚರಣಂ ಪವಿತ್ರಂ ವಿತತಂ ಪುರಾಣಂ ಯೇನ ಪೂತಸ್ತರತಿ ದುಷ್ಕೃತಾನಿ । ತೇನ ಪವಿತ್ರೇಣ ಶುದ್ಧೇನ ಪೂತಾ ಅತಿ ಪಾಪ್ಮಾನಮರಾತಿಂ ತರೇಮ । ಲೋಕಸ್ಯ ದ್ವಾರಮರ್ಚಿಮತ್ಪವಿತ್ರಂ ಜ್ಯೋತಿಷ್ಮದ್ಭ್ರಾಜಮಾನಂ ಮಹಸ್ವತ್ । ಅಮೃತಸ್ಯ ಧಾರಾಬಹುಧಾ ದೋಹಮಾನಂ ಚರಣಂ ನೋ ಲೋಕೇ ಸುಧಿತಾಂ ದಧಾತು ।**

(ವಿಶ್ವೇದೇವರ ಮಂಡಲದಲ್ಲಿ ವಿಷ್ಣುವನ್ನು ಸ್ವಾಗತಿಸಿ ಪಾದ ತೊಳೆಯುವುದು.)
(ಬ್ರಾಹ್ಮಣಾಭಾವವಾದ ಪಕ್ಷದಲ್ಲಿ ಮಂತ್ರಗಳನ್ನು ಉಚ್ಚರಿಸಿ ಹೂವು, ಗಂಧ, ಅಕ್ಷತೆ ತೆಗೆದು ನೀರು ಸೇರಿಸಿ ಮಂಡಲದಲ್ಲಿ ಹಾಕುವುದು.)

**ತತಃ ಕರ್ತಾ ಪವಿತ್ರಂ ವಿಸೃಜ್ಯ ಸ್ವಯಂ ಪಾದೌ ಪ್ರಕ್ಷಾಲ್ಯ ಮಂಡಲಾದೀಶಾನ್ಯೇ ದ್ವಿರಾಚಮ್ಯ ಮಂಡಲ ಪೂರ್ವಭಾಗೇ ವಿಶ್ವೇದೇವಾ ಮಂಡಲೋತ್ತರ ಭಾಗೇ ಪಿತರಃ ಆದೌ ವಿಪ್ರಣಾಮಾಚಮನಂ ಪಶ್ಚಾತ್ ಕರ್ತುರಾಚಮನಂ ಅಗ್ರೇ ಕರ್ತಾ ಪಶ್ಚಾತ್ ಬ್ರಾಹ್ಮಣಾಃ ಇತಿ ಕ್ರಮೇಣ ಗೃಹಂ ಪ್ರವಿಶ್ಯ।**
(ಕೈಯಲ್ಲಿ ಧರಿಸಿದ ಪವಿತ್ರವನ್ನು ವಿಸರ್ಜಿಸಿ ತಾನು ಪಾದಗಳನ್ನು ತೊಳೆದು ಬ್ರಾಹ್ಮಣರಿಂದ ನೀರನ್ನು ಸ್ವೀಕರಿಸಿಕೊಂಡು, ಮಂಡಲ ಪೂರ್ವಭಾಗದಲ್ಲಿ ವಿಶ್ವೇದೇವರೂ ಮಂಡಲದ ಉತ್ತರ ಭಾಗದಲ್ಲಿ ಪಿತೃಗಳೂ ಆಚಮನ ಮಾಡಿದ ನಂತರ ಈಶಾನ್ಯ ದಿಕ್ಕಿನಲ್ಲಿ ತಾನು ಆಚಮನ ಮಾಡಬೇಕು. ಕರ್ತೃವನ್ನು ಅನುಸರಿಸಿ ಬ್ರಾಹ್ಮಣರು ಒಳಗೆ ಬರಬೇಕು.)

**ವಿಶ್ವೇದೇವಸ್ಥಾನೇ ದ್ವೌ ವಿಪ್ರೌ ಪ್ರಾಙ್ಮುಖೌ ಪಿತ್ರ್ಯೇ ತ್ರಯಃ ಉದಙ್ಮುಖಾಃ ಸರ್ವೇ ಪ್ರಾಙ್ಮುಖಾ ವಾ । ಉಭಯತ್ರ ಏಕಮೇಕಂ ವಾ ಆಸನೇಷು ಉಪವೇಶ್ಯ ।**
(ವಿಶ್ವೇದೇವಸ್ಥಾನಕ್ಕೆ ಇಬ್ಬರು ಪೂರ್ವಾಭಿಮುಖವಾಗಿಯೂ ಪಿತೃಸ್ಥಾನಕ್ಕೆ ಮೂವರು ಉತ್ತರಮುಖವಾಗಿಯೂ ಅಥವಾ ಕ್ರಮವಾಗಿ ಒಬ್ಬೊಬ್ಬರಂತೆ ಕುಳಿತುಕೊಳ್ಳಬೇಕು.)

**ಆಚಮಿಸಿ ಪವಿತ್ರ ಹಾಕಿ ಗದಾಧರ ವಿಷ್ಣುಪೂಜೆ.**

ಆಚಮ್ಯ । ಗದಾಧರ ಶ್ರೀ ಮಹಾವಿಷ್ಣುಪೂಜಾಂ ಕರಿಷ್ಯೇ ।

ವಿಷ್ಣೋಃ ಸ್ವಾಗತಂ । ವಿಷ್ಣೋರಿದಂ ವಃ ಪಾದ್ಯಂ ವಿಷ್ಣೋರಿದಮಾಸನಂ ।

ಓಂ ತದ್ವಿಷ್ಣೋಃ ಪರಮಂ ಪದಗ್ಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಂ । ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಸ್ಸಮಿಂಧತೇ । ವಿಷ್ಣೋರ್ಯತ್ಪರಮಂ ಪದಂ ।

ವಿಷ್ಣುಮಾವಾಹಯಿಷ್ಯೇ । ವಿಷ್ಣುಮಾವಾಹಯಾಮಿ ।
ಅತ್ರಾಸ್ತಾಂ ಭಗವನ್ ವಿಷ್ಣೋಃ ಕ್ಷಣಃ ಕ್ರಿಯತಾಂ ।

ನಮೋಸ್ತ್ವನಂತಾಯ ಸಹಸ್ರಮೂರ್ತಯೇ
ಸಹಸ್ರಪಾದಾಕ್ಷಿಶಿರೋರುಬಾಹವೇ ।
ಸಹಸ್ರನಾಮ್ನೇ ಪುರುಷಾಯ ಶಾಶ್ವತೇ
ಸಹಸ್ರಕೋಟೀಯುಗಧಾರಿಣೇ ನಮಃ ॥

ಓಂ ವಿಷ್ಣವೇ ನಮಃ ಇದಮರ್ಚನಂ । ವಿಷ್ಣವೇ ಇದಂ ವೋಽರ್ಘ್ಯಂ । ವಿಷ್ಣವೇ ಸ್ನಾನಂ । ವಿಷ್ಣವೇ ಆಚಮನಂ । ವಿಷ್ಣವೇ ವಸ್ತ್ರಂ । ವಿಷ್ಣವೇ ಗಂಧಾಃ । ವಿಷ್ಣವೇ ಅಕ್ಷತಾಃ । ವಿಷ್ಣವೇ ಪುಷ್ಪಾಣಿ । ವಿಷ್ಣವೇ ನಮಃ ಅಯಂ ವೋ ಧೂಪಃ । ವಿಷ್ಣವೇ ನಮಃ ಇದಂ ವೋ ಜ್ಯೋತಿಃ । ನೈವೇದ್ಯಂ । ವಿಷ್ಣವೇ ನಮಃ ಇದಂ ವಃ ಪುನರರ್ಘ್ಯಂ । ಶ್ರೀ ಪಾದಪದ್ಮಾಭ್ಯಾಂ ನಮಃ
(ವಿಷ್ಣುಮಂಡಲದಲ್ಲಿ ಆವಾಹನೆ ಆಸನ ಪಾದ್ಯ ನೈವೇದ್ಯಾದಿಗಳಿಂದ ಪೂಜಿಸಿ.)

ಆದಿವ್ಯಾಧಿಹರಂ ನೃಣಾಂ ಮೃತ್ಯುದಾರಿದ್ರ್ಯನಾಶನಂ ।
ಶ್ರೀಪುಷ್ಟಿಕೀರ್ತಿದಂ ವಂದೇ ವಿಷ್ಣುಶ್ರೀಪಾದಪಂಕಜಂ ॥
ಅಂಜನಾಭ್ಯಂಜನಂ ವಾಸಃ ಶುದ್ಧಜಲ ಸಮಸ್ತೋಪಚಾರಾಃ ।
ಶ್ರೀ ಮಹಾವಿಷ್ಣವೇ ನಮಃ ಇದಂ ವೋಽಸ್ತ್ವರ್ಘ್ಯಂ ಸಂಪೂರ್ಣಮಸ್ತು ॥

ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧೇ ಗದಾಧರ ಶ್ರೀ ಮಹಾವಿಷ್ಣುಮುದ್ದಿಶ್ಯ ಆಸನಾದ್ಯರ್ಘ್ಯಾಂತಂ ಮಯಾ ಕೃತಮಾರಾಧನಂ ಯಥಾಶಾಸ್ತ್ರೀಯ ಮಸ್ತು। ಸಕಲಾರಾಧನೈಃ ಸ್ವರ್ಚಿತಮಸ್ತು ।

(ಹೂ ಗಂಧ ಅಕ್ಷತೆಗಳನ್ನು ನೀರು ಸೇರಿಸಿ ದೇವರಿಗೆ ಹಾಕುವುದು.)

ಯುಷ್ಮದನುಜ್ಞಯಾ ಉಪಕ್ರಾಂತಂ ಶ್ರಾದ್ಧಾರ್ಚನಂ ಕರ್ಮ ಕರಿಷ್ಯೇ ।

ವಿಶ್ವೇದೇವರಿಗೆ ಆಸನ ಪ್ರದಾನ.

ಅಥ ಋಜು ದರ್ಭದ್ವಯಂ ಗೃಹೀತ್ವಾ । ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧೇ ಪುರೂರವಾದ್ರ್ರವಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ ಇದಮಾಸನಂ । ಇತಿ ವಿಪ್ರದಕ್ಷಿಣಭಾಗೇ ಪೀಠೋಪರಿ ನಿಧಾಯ ಆಸ್ಯತಾಂ ಇತ್ಯುಕ್ತ್ವಾ ।

(ಎರಡು ದರ್ಭೆಗಳನ್ನು ವಿಶ್ವೇದೇವನ ಬಲಪಾರ್ಶ್ವದಲ್ಲಿ ಇಡಬೇಕು.)

ತತೋ ಬ್ರಾಹ್ಮಣಾಃ - ಧರ್ಮೋಽಸಿ ವಿಶಿರಾಜಾ ಪ್ರತಿಷ್ಠಿತಃ ।

ಇತಿ ತಾನ್ ದರ್ಭಾನ್ ಸ್ವೀಕೃತ್ಯ ।

ಆಸನಾರ್ಥಮುದಕಂ । ಪಿತೃಗಳಿಗೆ ಆಸನ.

ಪ್ರಾಚೀನಾವೀತೀ ಸತಿಲಾನ್ ತ್ರಿಗುಣಿತದರ್ಭಾನ್ ಗೃಹೀತ್ವಾ ಪಿತುಃ (ಮಾತುಃ) ಪ್ರತಿಸಾಂವತ್ಸರಿಕ ಶ್ರಾದ್ಧೇ ಪಿತೃ ಪಿತಾಮಹ ಪ್ರಪಿತಾಮಹಾನಾಂ (ಮಾತೃ ಪಿತಾಮಹೀ ಪ್ರಪಿತಾಮಹೀನಾಂ) ಶರ್ಮಣಾಂ (ದಾಯೀನಾಂ) ಗೋತ್ರಣಾಂ ವಸುರುದ್ರಾದಿತ್ಯರೂಪಣಾಂ ಇದಮಾಸನಂ ।

ಇತಿ ಪಿತೃವಾಮಭಾಗೇ ಪೀಠೋಪರಿ ನಿಧಾಯ । ಆಸ್ಯತಾಂ । ಇತ್ಯುಕ್ತ್ವಾ ।

(ಎಳ್ಳು ಸೇರಿಸಿ ಮೂರು ದರ್ಭೆಗಳನ್ನು ಪಿತೃಗಳ ವಾಮಭಾಗದಲ್ಲಿ ಇಟ್ಟು 'ಆಸ್ಯತಾಂ' ಎಂದು ಹೇಳಬೇಕು.)

ಪ್ರತಿವಚನಂ - ಧರ್ಮೋಽಸಿ ವಿಶಿರಾಜಾ ಪ್ರತಿಷ್ಠಿತಃ ।

ತಾನ್ ದರ್ಭಾನ್ ಸ್ವೀಕೃತ್ಯ ಆಸನಾರ್ಥಮುದಕಂ । ಹಸ್ತಕ್ಕೆ ನೀರು

ಉಪವೀತೀ

ನಿಹನ್ಮಿ ಸರ್ವಂ ಯದಮೇಧ್ಯವದ್ಭವೇ
ದ್ಧತಾಶ್ಚ ಸರ್ವೇಽಸುರದಾನವಾ ಯೇ ।
ಯೇ ರಾಕ್ಷಸಾ ಭೂತಪಿಶಾಚ ಗುಹ್ಯಕಾ
ಹತಾ ಮಯಾ ಯಾತುಧಾನಾಶ್ಚ ಸರ್ವೇ ॥

ಇತಿ ಭೂತಾದೀನುತ್ಸಾದ್ಯ ।

ದೇವತಾಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವ ಚ ।
ನಮಃ ಸ್ವಧಾಯೈ ಸ್ವಾಹಾಯೈ ನಿತ್ಯಮೇವ ನಮೋ ನಮಃ ॥
ಶ್ರಾದ್ಧಭೂಮಿಂ ಗಯಾಂ ಧ್ಯಾತ್ವಾ ಧ್ಯಾತ್ವಾ ದೇವಂ ಜನಾರ್ದನಂ ।
ವಸ್ವಾದೀಂಶ್ಚ ಪಿತೄನ್ ಧ್ಯಾತ್ವಾ ತತಃ ಶ್ರಾದ್ಧಂ ಪ್ರವರ್ತತೇ ॥
ಸಂಕಲ್ಪಸಿದ್ಧಿರಸ್ತು । ಅಸ್ತು ಸಂಕಲ್ಪ ಸಿದ್ಧಿಃ ।

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।
ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥
ಇತಿ ಶಾಕಾನ್ನಾದೀನ್ ಪ್ರೋಕ್ಷ್ಯ ।

(ಸಿದ್ಧಪಡಿಸಿದ ಪಾಕಗಳಿಗೆ ಪ್ರೋಕ್ಷಣ.)

ಶ್ರಾದ್ಧಾರ್ಥಂ ಮಯಾ ಸಂಪಾದಿತಾಃ ಪದಾರ್ಥಾಃ ಶ್ರಾದ್ಧಹವಿರ್ಯೋಗ್ಯಾ ಭವಂತ್ವಿತಿ ಭವಂತೋ ಬ್ರುವಂತು ।

ಶ್ರಾದ್ಧಹವಿರ್ಯೋಗ್ಯಾ ಭವಂತು । ಇತಿ ಪ್ರತಿವಚನಂ

ಅರ್ಘ್ಯಾರ್ಥಂ ವಿವಿಕ್ತದೇಶೇ ಚತುರಸ್ರಮಂಡಲದ್ವಯಂ ಕೃತ್ವಾ । ತತ್ರ ಪಾತ್ರದ್ವಯಂ ನ್ಯಬ್ಜ್‌ನಿಧಾಯ ತದುಪರಿ ಪ್ರತ್ಯೇಕಂ ಕೂರ್ಚದ್ವಯಂ ನಿಧಾಯ ಪ್ರೋಕ್ಷ್ಯ ಉತ್ತಾನಂ ಕೃತ್ವಾ ಉದಗಗ್ರೇ ಪವಿತ್ರೇ ನಿಧಾಯ ।
ವಿಶ್ವೇದೇವರ ಬಲಪಾರ್ಶ್ವದಲ್ಲಿ ಪ್ರತ್ಯೇಕ ಪ್ರತ್ಯೇಕ ಚತುರಸ್ರಮಂಡಲದಲ್ಲಿ ಎರಡು ಪಾತ್ರೆಗಳನ್ನು ಕವಚಿ ಇಡಬೇಕು. ಕೂರ್ಚೆಯಿಂದ ನೀರನ್ನು ಪ್ರೋಕ್ಷಿಸಿ ಪಾತ್ರೆಯನ್ನು ಮಗುಚಿ ಇಟ್ಟು ಉದಗಗ್ರವಾಗಿ ಕೂರ್ಚೆಯನ್ನು ಇಡಬೇಕು. ವಿಶ್ವೇದೇವರ ಸ್ಥಾನಕ್ಕೆ ಒಬ್ಬನೇ ಆದರೆ ಒಂದು ಅರ್ಘ್ಯಪಾತ್ರ ಸಾಕು.

ಓಂ ಶನ್ನೋ ದೇವೀ ರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋ ರಭಿಸ್ರವಂತು ನಃ ।

ಇಮಾಃ ವಿಶ್ವೇಭ್ಯೋ ದೇವೇಭ್ಯೋ ವೋ ಗೃಹ್ಣಾಮಿ ।
ಇತಿ ಪ್ರತ್ಯೇಕಂ ಜಲಂ ಪೂರಯಿತ್ವಾ ।

(ಪ್ರತ್ಯೇಕ ಪ್ರತ್ಯೇಕ ಈ ಮಂತ್ರದಿಂದ ಪಾತ್ರೆಗೆ ನೀರನ್ನು ತುಂಬಿಸಬೇಕು.)

ಓಂ ಯವೋಸಿ ಧಾನ್ಯರಾಜೋಸಿ ವಾರುಣೋ ಮಧು ಮಿಶ್ರಿತಃ । ನಿರ್ಣೋದಃ ಸರ್ವಪಾಪಾನಾಂ ಪವಿತ್ರ ಮೃಷಿಭಿಃ ಸ್ಮೃತಂ ।

ಇತಿ ಯವಾನ್ ವಿಕೀರ್ಯ ।

(ಯವಧಾನ್ಯ ಅಥವಾ ಭತ್ತವನ್ನು ಹಾಕಬೇಕು.)

ಓಂ ಶುಕ್ರಮಸಿ ಜ್ಯೋತಿರಸಿ ತೇಜೋಸಿ ದೇವೋ ವಃ ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಸ್ಸೂರ್ಯಸ್ಯ ರಶ್ಮಿಭಿಃ ।

ಇತ್ಯಾಜ್ಯಂ । (ತುಪ್ಪವನ್ನು ಹಾಕಬೇಕು.)

ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ । ಈಶ್ವರೀಗ್ಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ಇತಿ । ಗಂಧಂ ।

ಓಂ ಹಿರಣ್ಯಪಾತ್ರಂ ಮಧೋಃ ಪೂರ್ಣಂ ದದಾತಿ । ಮಧವ್ಯೋಸಾನೀತಿ । ಏಕಧಾ ಬ್ರಹ್ಮಣ ಉಪಹರತಿ । ಏಕಧೈವ ಯಜಮಾನ ಆಯುಸ್ತೇಜೋ ದಧಾತಿ । ಇತಿ ಹಿರಣ್ಯಂ ।

ಓಂ ಕಾಂಡಾತ್ಕಾಂಡಾತ್ಪ್ರರೋಹಂತೀ ಪರುಷಃ ಪರುಷಃ ಪರಿ । ಏವಾನೋ ದೂರ್ವೇ ಪ್ರತನು ಸಹಸ್ರೇಣ ಶತೇನ ಚ । ಇತಿ ದೂರ್ವಾಃ । (ಗರಿಕೆ)

ಓಂ ದೇವಸ್ಯ ತ್ವಾ ಸವಿತುಃ ಪ್ರಸವೇಶ್ವಿನೋರ್ಬಾಹುಭ್ಯಾಂ । ಪೂಷ್ಣೋ ಹಸ್ತಾಭ್ಯಾಂ। ಇತಿ ಕುಶೋದಕಂ ।

ಆಜ್ಯಾದಿಕಂ ಮಂತ್ರವದ್ವಾ ತೂಷ್ಣೀಂ ವಾ ದತ್ವಾ । ದರ್ಭೈಃ ದೂರ್ವಾಭಿಃ ಪ್ರಚ್ಛಾದ್ಯ। (ಮೇಲೆ ಹೇಳಿದಂತೆ ಅರ್ಘ್ಯಪಾತ್ರಕ್ಕೆ ನೀರು, ಧಾನ್ಯ, ತುಪ್ಪ, ಗಂಧ, ಹಿರಣ್ಯ, ಗರಿಕೆ, ಕುಶೋದಕಗಳನ್ನು ಹಾಕಿ ದರ್ಭೆ ಮತ್ತು ದೂರ್ವೆಗಳಿಂದ ಮುಚ್ಚಬೇಕು.)

ಪಿತುಃ (ಮಾತುಃ) ಪ್ರತಿಸಾಂವತ್ಸರಿಕ ಶ್ರಾದ್ಧೇ ಪುರೂರವಾರ್ದ್ರವಸಂಜ್ಞಕಾ ವಿಶ್ವೇದೇವಾಃ ಅರ್ಘ್ಯೇ ಮಯಾ ಕೃತಮಾರಾಧನಂ ಯಥಾಶಾಸ್ತ್ರೀಯ ಮಸ್ತ್ವಿತಿ ಭವಂತೋ ಬ್ರುವಂತು ।

ಯಥಾ ಶಾಸ್ತ್ರೀಯಮಸ್ತು । ಇತಿ ಪ್ರತಿವಚನಂ ।
ಅರ್ಘ್ಯಪಾತ್ರಂ ಸಂಪನ್ನಂ । ಸುಸಂಪನ್ನಂ ಇತಿ ಪ್ರತಿವಚನಂ ।
ಅಥ ಪುಷ್ಪಾಕ್ಷತಾನ್ ಗೃಹೀತ್ವಾ ಪ್ರಹ್ವೋ ಭೂತ್ವಾ ।
(ವಿಶ್ವೇದೇವರ ಬಳಿಯಲ್ಲಿ ಪಶ್ಚಿಮಾಭಿಮುಖವಾಗಿ ಪುಷ್ಪಾಕ್ಷತೆಗಳನ್ನು ಹಿಡಿದುಕೊಂಡು)

ಆಗಚ್ಛಂತು ಮಹಾಭಾಗಾ ವಿಶ್ವೇದೇವಾ ಮಹಾಬಲಾಃ ।
ಯೇ ಚಾತ್ರ ಯೋಜಿತಾಃ ಶ್ರಾದ್ಧೇ ಸಾವಧಾನಾ ಭವಂತು ತೇ ॥

ಪುರೂರವಾರ್ದ್ರಕಸಂಜ್ಞಕಾನ್ ವಿಶ್ವಾನ್ ದೇವಾನ್ ಭವತ್ಸು ಆವಾಹಯಿಷ್ಯೇ । ಇತ್ಯನುಜ್ಞಾಪ್ಯ । ಆವಾಹಯೇತ್ಯುಕ್ತೇ ।

ಓಂ ವಿಶ್ವೇ ದೇವಾಸ ಆಗತಃ ಶೃಣುತಾಮ ಇದಗ್ಂ ಹವಂ । ಏದಂ ಬರ್ಹಿರ್ನಿಷೀದತ । ವಿಶ್ವೇದೇವಾಃ ಶೃಣುತೇಮಗ್ಂ ಹವಂ ಮೇ ಯೇ ಅಂತರಿಕ್ಷೇ ಯ ಉಪದ್ಯವಿಷ್ಠ । ಯೇ ಅಗ್ನಿಜಿಹ್ವಾ ಉತವಾ ಯಜತ್ರಾ ಆಸದ್ಯಾಸ್ಮಿನ್ ಬರ್ಹಿಷಿ ಮಾದಯಧ್ವಂ ।

ಪುರೂರವಾರ್ದ್ರವಸಂಜ್ಞಕಾನ್ ವಿಶ್ವಾನ್ ದೇವಾನ್ ಭವತ್ಸು ಆವಾಹಯಾಮಿ ಇತಿ ಪುಷ್ಪಾಕ್ಷತಾದಿಕಂ ಪಾದಯೋಃ ಕ್ಷಿಪೇತ್ ।
(ಪುಷ್ಪಾಕ್ಷತೆಗಳನ್ನು ವಿಶ್ವೇದೇವರ ಪಾದಗಳಲ್ಲಿ ಅರ್ಪಿಸಬೇಕು.)

ಆವಾಹನಾರ್ಥಮುದಕಂ । ಅಥ ವಿಪ್ರಾಂಗುಷ್ಠಂ ಗೃಹೀತ್ವಾ ।
(ವಿಶ್ವೇದೇವನ ಬಲದ ಹೆಬ್ಬೆರಳನ್ನು ಹಿಡಿದು)

ವೈಶ್ವದೇವೇ ಕ್ಷಣಃ ಕ್ರಿಯತಾಂ । ಓಂ ತಥಾ । ಇತಿ ಪ್ರತಿವಚನಂ ।
ಪ್ರಾಪ್ನೋತು ಭವಾನ್ । ಪ್ರಾಪ್ನವಾನಿ ।ಇತಿ ಪ್ರತಿವಚನಂ ।
ಅಥ ಅಕ್ಷತಾನ್ ಗೃಹೀತ್ವಾ ।

ಓಂ ಯೇ ದೇವಾ ದಿವಿಭಾಗಾ ಯೇಂತರಿಕ್ಷ ಭಾಗಾ ಯೇ ಪೃಥಿವಿ ಭಾಗಾಃ । ತ ಇಮಂ ಯಜ್ಞಮವಂತು ತ ಇದಂ ಕ್ಷೇತ್ರ ಮಾವಿಶಂತು ತ ಇದ ಕ್ಷೇತ್ರಂ ಮನು ವಿವಿಶಂತು ।

ಪುರೂರವಾದ್ರ್ರವಸಂಜ್ಞಕಾ ವಿಶ್ವೇದೇವಾಃ ಇದಮರ್ಚನಂ
(ವಿಶ್ವೇದೇವನ ಬಲಭಾಗಕ್ಕೆ ಅಕ್ಷತೆಯಿಂದ ಅರ್ಚಿಸುವುದು.)

ಹಸ್ತೋದಕಂ । ವಿಪ್ರಹಸ್ತೇ ಜಲಂ ದತ್ವಾ । (ಕೈಗೆ ನೀರು ಕೊಡಬೇಕು.)

ವಿಪ್ರಹಸ್ತೇ ಪೂರ್ವಾಗ್ರಂ ಕೂರ್ಚಂ ನಿಧಾಯ । ಅರ್ಘ್ಯಪಾತ್ರಜಲಂ ಪಾತ್ರಾಂತರೇ ಗೃಹೀತ್ವಾ ।

ಓಂ ಯಾ ದಿವ್ಯಾಃ ಆಪಃ ಪಯಸಾ ಸಂಬಭೂವುಃ । ಯಾ ಅಂತರಿಕ್ಷ ಉತಪಾರ್ಥಿವೀರ್ಯಾಃ । ಹಿರಣ್ಯವರ್ಣಾಯಜ್ಞಿಯಾಸ್ತಾನ ಆಪಶ್ಶಗ್ಂ ಸ್ಯೋನಾ ಭವಂತು ।

ಪುರೂರವಾದ್ರ್ರವಸಂಜ್ಞಕಾ ವಿಶ್ವೇದೇವಾಃ ಇದಂ ವೋಽರ್ಘ್ಯಮಿದಂ ವೋಽರ್ಘ್ಯಂ ।
(ವಿಶ್ವೇದೇವನ ಬಲಗೈಯಲ್ಲಿ ಅರ್ಘ್ಯಪಾತ್ರೆಯ ಕೂರ್ಚೆಯನ್ನು ಪೂರ್ವಾಗ್ರವಾಗಿ ಇರಿಸಿ ಅರ್ಘ್ಯಪಾತ್ರದ ನೀರನ್ನು ಎರಡು ಬಾರಿ ಕೊಡಬೇಕು.)

ಅಸ್ತ್ವರ್ಘ್ಯಂ । ಪ್ರತಿವಚನಂ ।

ಓಂ ಯುವಾ ಸುವಾಸಾಃ ಪರಿವೀತ ಆಗಾತ್ । ಸ ಉಶ್ರೇಯಾನ್ ಭವತಿ ಜಾಯಮಾನಃ । ತಂ ಧೀರಾಸಃ ಕವಯ ಉನ್ನಯಂತಿ । ಸ್ವಾಧಿಯೋ ಮನಸಾ ದೇವಯಂತಃ । ವಿಶ್ವೇದೇವಾ ಆಚ್ಛಾದನಾರ್ಥೇ ವಸ್ತ್ರಂ । ಅಥವಾ (ಇಮೌ ಕುಶೌ)

ಓಂ ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ಸಹಜಂ ಪುರಸ್ತಾತ್ । ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ ॥

(ಈ ಸೌರಮಂತ್ರಕ್ಕೆ ಸ್ವರ ಚಿಹ್ನೆಯನ್ನು ಬೇರೆ ವಿಧವಾಗಿ ಕಾಣಿಸಿದವರೂ ಕೆಲವರಿದ್ದಾರೆ.)

ಪುರೂರವಾದ್ರ್ರವಸಂಜ್ಞಕಾ ವಿಶ್ವೇದೇವಾಃ । ಧಾರಣಾರ್ಥಮುಪವೀತಂ। ಹಸ್ತೋದಕಂ ।

ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ । ಈಶ್ವರೀಗ್‌ಂ ಸರ್ವ ಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ।

ವಿಶ್ವೇದೇವಾಃ ಲೇಪನಾರ್ಥೇ ಇಮೇ ವೋ ಗಂಧಾಃ । ಸುಗಂಧಾಃ ಇತಿ ಪ್ರತಿವಚನಂ । ಹಸ್ತೋದಕಂ ।

ಓಂ ಅರ್ಚತ ಪ್ರಾರ್ಚತ ಪ್ರಿಯ ಮೇಧಾಸೋ ಅರ್ಚತ । ಅರ್ಚಂತು ಪುತ್ರಕಾ ಉತಪುರನ್ನ ಧೃಷ್ಣ್ವರ್ಚತ ।

ಪುರೂರವಾದ್ರ್ರವಸಂಜ್ಞಕಾ ವಿಶ್ವೇದೇವಾಃ ಇಮೇ ವೋಕ್ಷತಾಃ । ಸಂತ್ವಕ್ಷತಾಃ ಹಸ್ತೋದಕಂ ।

ಓಂ ಆಯನೇ ತೇ ಪರಾಯಣೇ ದೂರ್ವಾರೋಹಂತು ಪುಷ್ಪಿಣೀಃ । ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ ।

(ಈ ಮಂತ್ರದ ಸ್ವರದಲ್ಲಿ ಮತಭೇದವಿದೆ.)

ವಿಶ್ವೇದೇವಾಃ । ಇಮಾನಿ ವೋ ದೂರ್ವಾಂಕುರಭೃಂಗರಾಜಕುಶತುಲಸಿ ಶ್ವೇತಪತ್ರಪುಷ್ಪಾಣಿ ಮಾಲ್ಯಾನಿ । ಸಂತು ಪುಷ್ಪಾಣಿ ಮಾಲ್ಯಾನಿ । ಹಸ್ತೋದಕಂ ।

ಓಂ ಧೂರಸಿ ಧೂರ್ವ ಧೂರ್ವಂತಂ ಧೂರ್ವತಂ ಯೋಸ್ಮಾನ್ ಧೂರ್ವತಿ ತಂಧೂರ್ವಯಂ ವಯಂ ಧೂರ್ವಾಮಃ ।

ಪುರೂರವಾರ್ದ್ರವಸಂಜ್ಞಕಾ ವಿಶ್ವೇದೇವಾಃ । ಅಯಂ ವೋ ಧೂಪಃ ಸುಧೂಪಃ । ಹಸ್ತೋದಕಂ ।

ಓಂ ಉದ್ದೀಪ್ಯಸ್ವ ಜಾತವೇದೋಪಘ್ನಂ ನಿಋಋತಿಂ ಮಮ । ಪಶೂಗ್‌ಶ್ಚ ಮಹ್ಯಮಾವಹ ಜೀವನಂ ಚ ದಿಶೋ ದಿಶ ।

(ಹಸ್ತೋದಕಂ ಎಂಬಲ್ಲಿ ಕೈಗೆ ನೀರು ಕೊಡಬೇಕು.)

ಓಂ ಯಾ ದಿವ್ಯಾ ಆಪಃ ಪಯಸಾ ಸಂಭಭೂವುಃ । ಯಾ ಅಂತರಿಕ್ಷ ಉತಪಾರ್ಥಿವೀರ್ಯಾಃ । ಹಿರಣ್ಯವರ್ಣಾ ಯಜ್ಞಿಯಾಸ್ತಾನ ಆಪಶ್ಶಗ್‌ಗ್ ಸ್ಯೋನಾ ಭವಂತು ।

ಪುರೂರವಾರ್ದ್ರವಸಂಜ್ಞಕಾ ವಿಶ್ವೇದೇವಾಃ ಇದಂ ವಃ ಪುನರರ್ಘ್ಯ ಮಿದಂ ವಃ ಪುನರರ್ಘ್ಯಂ ।

(ಮೊದಲಿನಂತೆ ಕೂರ್ಚೆಯನ್ನು ಕೈಯಲ್ಲಿರಿಸಿ ನೀರನ್ನು ಕೊಡಬೇಕು.)

ಅಸ್ತು ಪುನರರ್ಘ್ಯಂ । ಹಸ್ತೋದಕಂ । ಶ್ರೀ ಪಾದಪದ್ಮಾಭ್ಯಾಂ ನಮಃ ।

ಆಧಿವ್ಯಾಧಿಹರಂ ನೃಣಾಂ ಮೃತ್ಯುದಾರಿದ್ರ್ಯನಾಶನಂ ।
ಶ್ರೀಪುಷ್ಟಿಕೀರ್ತಿದಂ ವಂದೇ ವಿಪ್ರ ಶ್ರೀಪಾದಪಂಕಜಂ ॥
ವಿಪ್ರಾಂಘ್ರಿದರ್ಶನಾತ್ಸದ್ಯಃ ಕ್ಷೀಯಂತೇ ಪಾಪರಾಶಯಃ ।
ವಂದನಾನ್ಮಂಗಲಾವಾಪ್ತಿರರ್ಚನಾದಚ್ಯುತಂ ಪದಂ ॥
ಶ್ರೀ ಪಾದಪದ್ಮಾಭ್ಯಾಂ ನಮಃ । ಪಾದಾದಿ ಕೇಶಾಂತಂ ಸ್ವರ್ಚಿತಮಸ್ತು ।

(ವಿಶ್ವೇದೇವರ ಪಾದಗಳಲ್ಲಿ ಪುಷ್ಪಗಂಧಾದಿಗಳಿಂದ ಅರ್ಚಿಸುವುದು.)

ಸ್ವಗೋತ್ರೋಹಮಭಿವಾದಯೇ । ಅಂಜನಾಭ್ಯಂಜನಂ ವಾಸಃ ಶುದ್ಧಜಲ ಸಮಸ್ತೋಪಚಾರಾಃ ।

ಗಂಧಪುಷ್ಪಾಕ್ಷತಯವಕುಶಾಗ್ರಜಲಸರ್ಷಪಾಃ ।
ದೂರ್ವಾಶ್ಚೇತಿ ಕ್ರಮಾದುಕ್ತಾ ಹ್ಯಷ್ಟಾರ್ಘ್ಯದ್ರವ್ಯಕಲ್ಪನಾ ।

ಇತ್ಯೇತಾನಿ ಗೃಹೀತ್ವಾ । ಪುರೂರವಾರ್ದ್ರವಸಂಜ್ಞಕಾ ವಿಶ್ವೇದೇವಾಃ ಇದಂ ವೋಽಷ್ಟಾರ್ಘ್ಯಂ ಸಂಪೂರ್ಣಮಸ್ತ್ವಿತಿ ಭವಂತೋ ಬ್ರುವಂತು । ಅಸ್ತ್ವಷ್ಟಾರ್ಘ್ಯಂ ಸಂಪೂರ್ಣಂ । ಆಸನಾದ್ಯರ್ಘ್ಯಾಂತಂ ಭವತ್ಸು ಮಯಾ ಕೃತಮಾರಾಧನಂ ಯಥಾಶಾಸ್ತ್ರೀಯಮಸ್ತ್ವಿತಿ ಭವಂತೋ ಬ್ರುವಂತು ।
(ವಿಶ್ವೇದೇವರ ಕೈಯಲ್ಲಿ ಮೇಲೆ ಹೇಳಿದ ಗಂಧಾದಿ ಎಂಟು ದ್ರವ್ಯಗಳನ್ನು ಕೊಟ್ಟು ನೀರು ಹಾಕಬೇಕು.)

ಯಥಾ ಶಾಸ್ತ್ರೀಯಮಸ್ತು । ಯುಷ್ಮದನುಜ್ಞಯಾ ಉಪಕ್ರಾಂತಂ ಅಸ್ಮತ್ ಪಿತೄಣಾಂ ಅರ್ಚನಂ ಕರ್ಮ ಕರಿಷ್ಯೇ ।
(ನಿಮ್ಮ ಅನುಜ್ಞೆಯಂತೆ ನಮ್ಮ ಪಿತೃಗಳನ್ನು ಅರ್ಚಿಸುತ್ತೇನೆ.)

ಅಥ ಪಿತೃವಾಮಭಾಗೇ ವಿವಿಕ್ತದೇಶೇ ವಾ ದಕ್ಷಿಣಾಗ್ರಾನ್ ದರ್ಭಾನ್ ಸಗ್ಗ್‌ಸ್ತೀರ್ಯ ತೇಷು ತ್ರೀಣಿ ಪಾತ್ರಾಣಿ ಏಕೈಕಶೋ ನ್ಯಬ್ಜ್ ನಿಧಾಯ । ಅಥ ಪವಿತ್ರಮೇಕ ದರ್ಭಂ ಗ್ರಂಥಿರಹಿತಂ ಸಾಗ್ರಂ ಸಮೂಲಂ ಪ್ರಾದೇಶಮಾತ್ರಂ ಕೃತ್ವಾ। ತೂಷ್ಣೀಂ ಸಗ್ಗ್‌ಂಸ್ಕೃತಾಭಿರದ್ಭಿರುತ್ತಾನಾನಿ ಪಾತ್ರಾಣಿ ಕೃತ್ವಾ । ಪ್ರೋಕ್ಷ್ಯ । ತಿರಃ ಪವಿತ್ರಮಪ ಆನಯತಿ। ಪ್ರಾಚೀನಾವೀತೀ ।

(ಪಿತೃಗಳ ಎಡಭಾಗದಲ್ಲಿ ವೃತ್ತಮಂಡಲ ಬರೆದು ಪ್ರತ್ಯೇಕವಾಗಿ ದರ್ಭೆಗಳನ್ನು ಹರವಿ ಮೂರು ಸಣ್ಣ ಪಾತ್ರೆಗಳನ್ನು ಕೆಳಮುಖವಾಗಿ ಇಡಬೇಕು. ದರ್ಭೆಯ ಪವಿತ್ರದಿಂದ ನೀರನ್ನು ಪ್ರೋಕ್ಷಿಸಿ ಪಾತ್ರವನ್ನು ಸರಿಯಾಗಿಡಬೇಕು.)

ಓಂ ಆಮ ಆಗಚ್ಛಂತು ಪಿತರೋ ದೇವಯಾನಾನ್ ಸಮುದ್ರಾನ್ ಸಲಿಲಾನ್ ಸುಪರ್ಣಾನ್ । ಅಸ್ಮಿನ್ ಯಜ್ಞೇ ಸರ್ವಕಾಮಾನ್ ಲಭಂತೇ ಕ್ಷೀಯಮಾಣಾ ಉಪದುಹ್ಯಂತಾಂ ।

ಇಮಾಃ ಪಿತೃಭ್ಯೋ ವೋ ಗೃಹ್ಣಾಮಿ । ಏವಂ ದ್ವಿತೀಯಪಾತ್ರೇ ನಿಧಾಯ ।
(ಎರಡನೇ ಪಾತ್ರದಲ್ಲಿ ಪವಿತ್ರವನ್ನು ಇಟ್ಟು ಇದೇ ಮಂತ್ರದಿಂದ ನೀರನ್ನು ಸುರಿಯಬೇಕು.)

ಆಮ ಆಗಚ್ಛಂತು.....ಉಪದುಹ್ಯಂತಾಂ । ಇಮಾಃ ಪಿತಾಮಹೇಭ್ಯೋ ವೋ ಗೃಹ್ಣಾಮಿ । ಏವಂ ತೃತೀಯಪಾತ್ರೇ ನಿಧಾಯ ।
(ಮೂರನೇ ಪಾತ್ರೆಯಲ್ಲಿ ಉಕ್ತ ಮಂತ್ರದಿಂದ ಹೀಗೇ ನೀರನ್ನು ಸುರಿಯಬೇಕು.)

ಆಮ ಆಗಚ್ಛಂತು.....ಉಪದುಹ್ಯಂತಾಂ । ಇಮಾಃ ಪ್ರಪಿತಾಮಹೇಭ್ಯೋ ವೋ ಗೃಹ್ಣಾಮಿ । ಏಕಪಾತ್ರಪಕ್ಷೇ ತತ್ರೈವ ತ್ರಿರ್ಗೃಹೀತ್ವಾ ।
(ಪಿತೃಸ್ಥಾನಕ್ಕೆ ಒಬ್ಬನೇ ಆದಲ್ಲಿ ಅರ್ಘ್ಯಪಾತ್ರವು ಒಂದು ಸಾಕು.)

ಮೇಲೆ ಹೇಳಿದ ಮಂತ್ರದಿಂದ ಪಿತೃಪಿತಾಮಹಪ್ರಪಿತಾಮಹೇಭ್ಯೋ ವೋ ಗೃಹ್ಣಾಮಿ । ಮಾತೃ ಪಿತಾಮಹೀ ಪ್ರಪಿತಾಮಹೀಭ್ಯೋ ವೋ ಗೃಹ್ಣಾಮಿ ।
(ಹೀಗೆ ಉಚ್ಚರಿಸಿ ನೀರು ಸುರಿಯಬೇಕು.)

ಪವಿತ್ರಮುದ್ಧೃತ್ಯ ತಿಲಾನಾವಪತಿ । ತಿಲೋಽಸಿ ಸೋಮದೈವತ್ಯೋ ಗೋಸವೋ ದೇವನಿರ್ಮಿತಃ । ಪ್ರತ್ನವದ್ಭಿಃ ಪ್ರತ್ನಸ್ಸ್ವಧಯೇಹಿ । ಪಿತೃಪಿತಾಮಹ ಪ್ರಪಿತಾಮಹಾನ್ ಇಮಾನ್ ಲೋಕಾನ್ ಪ್ರೀಣಯಾಹಿನಃ ಸ್ವಧಾ ನಮಃ ।
(ಪವಿತ್ರವನ್ನು ಎತ್ತಿ ಹಿಡಿದು ಎಳ್ಳನ್ನು ಪಾತ್ರೆಗೆ ಹಾಕಬೇಕು.)

ತಿರಃ ಪವಿತ್ರಂ ಮಧ್ವಾನಯತಿ ।
(ಪವಿತ್ರವು ಅರ್ಘ್ಯಪಾತ್ರದಲ್ಲಿರುತ್ತ ಈ ಮೂರು ಮಂತ್ರಗಳಿಂದ ಮೂರು ಬಾರಿ ಜೇನನ್ನು ಸುರಿಯಬೇಕು.)

ಓಂ ಮಧು ವಾತಾ ಋತಾಯತೇ । ಮಧುಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ । ಮಧುನಕ್ತ ಮುತೋಷಸಿ ಮಧುಮತ್ಪಾರ್ಥಿವಂಗ್ಂ ರಜಃ । ಮಧುದ್ಯೌರಸ್ತು ನಃ ಪಿತಾ । ಮಧುಮಾನ್ನೋ ವನಸ್ಪತಿರ್ಮಧುಮಾಗ್ಂ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ।

ಇತಿ ತಿಸೃಭಿಃ ಪ್ರತ್ಯೃಚಂ ತಿಷ್ವಪಿ ಕ್ರಮೇಣ ಮಧ್ವಾನೀಯ। ಅಥೈವತ್ಸರ್ವಾಭಿರಂಗುಲೀಭಿಃ ಸಮುದಿತಾಭಿರ್ಲೋಡಯತಿ।

ಓಂ ಸೋಮಸ್ಯ ತ್ವಿಷಿರಸಿ ತವೇವಮೇ ತ್ವಿಷಿರ್ಭೂಯಾದಮೃತಮಸಿ ಮೃತ್ಯೋರ್ಮಾ ಪಾಹಿ ದಿದ್ಯೋನ್ಮಾ ಪಾಹಿ।

(ಐದು ಬೆರಳುಗಳಿಂದಲೂ ಅರ್ಘ್ಯಪಾತ್ರೆಯ ದ್ರವ್ಯಗಳನ್ನು ಸಮ್ಮೇಲನ ಮಾಡಬೇಕು.)

ಅಥ ಯಚ್ಕಿಂಚಿತ್ತೃಣಾದಿಕಂ ತತ್ರ ಪತಿತಂ ಅಂಗುಷ್ಠಾನಾಮಿಕಾಭ್ಯಾಂ ಗೃಹೀತ್ವಾ ನೈಋತ್ಯಾಂ ದಿಶಿ ನಿರಸ್ಯತಿ.

ಓಂ ಅವೇಷ್ಟಾ ದಂದಶೂಕಾ ನಿರಸ್ತನ್ನ ಮುಚೇಶಿರಃ ।

(ಹೆಬ್ಬೆರಳು ಮತ್ತು ಪವಿತ್ರ ಬೆರಳುಗಳಿಂದ ಪಾತ್ರೆಯಲ್ಲಿ ಬಿದ್ದ ತೃಣಾದಿಗಳನ್ನು ಉದ್ಧರಿಸಿ ನೈಋತ್ಯ ದಿಕ್ಕಿಗೆ ಎಸೆಯಬೇಕು.)

ಇತಿ ಪ್ರತಿಪಾತ್ರಂ ನಿರಸ್ಯ ।

(ಎಲ್ಲಾ ಪಾತ್ರಗಳಿಂದಲೂ ಹೀಗೆ ಎಸೆಯಬೇಕು.)

ಅಪಉಪಸ್ಪೃಶ್ಯ । ಅಭಿಮೃಶತಿ । ಓಂ ಶನ್ನೋದೇವೀ........ವಂತು ನಃ । ಇತಿ ಗಂಧಾಕ್ಷತಪುಷ್ಪಾಣಿ ನಿಕ್ಷಿಪ್ಯ । ದರ್ಭೈಃ ದೂರ್ವಾಭಿಃ ಪ್ರಚ್ಛಾದ್ಯ । ಪಿತೃಪಾತ್ರಾಣಿ ಸಂಪನ್ನಾನಿ । ಸುಸಂಪನ್ನಾನಿ । ಪಿತುಃ (ಮಾತುಃ) ಪ್ರತಿಸಾಂವತ್ಸರಿಕ ಶ್ರಾದ್ಧೇ ಪಿತೃಪಿತಾಮಹಪ್ರಪಿತಾಮಹಾಃ (ಮಾತೃಪಿತಾಮಹೀಪ್ರಪಿತಾಮಹ್ಯಃ) ಅರ್ಘ್ಯೇಷು ಮಯಾ ಕೃತಮಾರಾಧನಂ ಯಥಾಶಾಸ್ತ್ರೀಯಮಸ್ತ್ವಿತಿ ಭವಂತೋ ಬ್ರುವಂತು । ಯಥಾಶಾಸ್ತ್ರೀಯಮಸ್ತು । ಅರ್ಘ್ಯಪಾತ್ರಂ ಸಂಪನ್ನಂ । ಸುಸಂಪನ್ನಂ । ಪಿತ್ರರ್ಚನಂ ।

ಅಥ ವಾಮಾಂಗುಷ್ಠಾನಾಮಿಕಾಭ್ಯಾಂ ತತ್ರೈವ ಭುವಂ ಸ್ಪೃಷ್ಟ್ವಾ ಜಪತಿ ।

ಓಂ ಯೇ ಪಾರ್ಥಿವಾಸಃ ಪಿತರೋ ಯೇಂತರಿಕ್ಷೇ ಯೇ ದಿವಿ ಯೇ ವಾ ಮೃತಾ ಬಭೂವುಃ । ತೇ ಅಸ್ಮಿನ್ ಯಜ್ಞೇ ಸಮವಯಂತಾಮ್ । ತಾ ಅಸ್ಮಿನ್ ಯಜ್ಞೇ ಸಮವಯಂತಾಮ್ । ಇತಿ ಸ್ತ್ರೀಣಾಂ ।

(ಎಡಕ್ಕೆ ಹೆಬ್ಬೆರಳು ಮತ್ತು ಪವಿತ್ರ ಬೆರಳುಗಳಿಂದ ಭೂಮಿಯನ್ನು ಸ್ಪರ್ಶಿಸಿಕೊಂಡು ಜಪ ಮಾಡಬೇಕು.)

ಅಥ ಭೋಜನಸ್ಥಾನೇಷು ಆಸನೇಷು ಚ ಸಸಿಕತತಿಲಾನ್ ವಿಕಿರತಿ ।

ಓಂ ಅಪಹತಾ ಅಸುರಾ ರಕ್ಷಾಗ್ಂಸಿ ಪಿಶಾಚಾ ಯೇ ಕ್ಷಯಂತಿ ಪೃಥಿವೀಮನು । ಅನ್ಯತ್ರೇತೋ ಗಚ್ಛಂತು ಯತ್ರೈಷಾಂ ಗತಂ ಮನಃ । (ಯತ್ರಾಸಾಂ ಗತಂ ಮನಃ) ಇತಿ ಸ್ತ್ರೀಣಾಂ ।

(ಊಟ ಮಾಡುವ ಸ್ಥಳದಲ್ಲಿ ಎಳ್ಳು ಹಾಕಬೇಕು.)

ಅಥೈನಮದ್ಭಿರವೋಕ್ಷತಿ ।

ಓಂ ಉದೀರತಾ ಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ । ಅಸುಂ ಯ ಈಯುರ ವೃಕಾ ಋತಜ್ಞಾಸ್ತೇನೋವಂತು ಪಿತರೋ ಹವೇಷು ।(ತಾನೋವಂತು ಮಾತರೋ ಹವೇಷು.) ಇತಿ ಸ್ತ್ರೀಣಾಂ ।

(ಈ ಮಂತ್ರದಿಂದ ನೀರನ್ನು ಪ್ರೋಕ್ಷಿಸಬೇಕು.)

ಪಿತೃಪಿತಾಮಹಪ್ರಪಿತಾಮಹಾನ್ ಭವತ್ಸ್ವಾವಾಹಯಿಷ್ಯೇ ಮಾತೃಪಿತಾಮಹೀ ಪ್ರಪಿತಾಮಹೀಃ ಭವತ್ಸ್ವಾವಾಹಯಿಷ್ಯೇ । (ಇತಿ ಸ್ತ್ರೀಣಾಂ)

ಸತಿಲಪುಷ್ಪಾಣ್ಯಂಜಲಾವಾನೀಯ ಪ್ರಹ್ವೋ ಭೂತ್ವಾ ।

ಓಂ ಆಯಾತ ಪಿತರಃ ಸೋಮ್ಯಾ ಗಂಭೀರೈಃ ಪಥಿಭಿಃ ಪೂರ್ವ್ಯೈಃ । ಪ್ರಜಾಮಸ್ಮಭ್ಯಂ ದದತೋ ರಯಿಂ ಚ ದೀರ್ಘಾಯುತ್ವಂ ಚ ಶತಶಾರದಂ ಚ । ಉದೀರಣಾ ಇಹ ಸಂತುನಃ ಸೋಮ್ಯಾಃ ಪಿತರಃ ಪಿತಾಮಹಾಃ ಪ್ರಪಿತಾಮಹಾಶ್ಚಸುಗ್ಯೈಃ ಸಹ । ಅಸುಂಗಮಾಃ ಸತ್ಯಯುಜೋ ವೃಕಾಸ ಆನೋವಂತು ಪಿತರೋ ದ್ಯಾಗಮಂತು । ಏಹ ಗಚ್ಛಂತು ಪಿತರೋ ಹವಿಷೇ ಅತ್ತವೇ । ಅಸ್ಮಿನ್ ಯಜ್ಞೇ ಬರ್ಹಿಷ್ಯಾ ನಿಷದ್ಯ ಮಾ ವೀರಃ ಪ್ರಮಾಯುಣಕ್ ।

ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧೇ ಪಿತೃಪಿತಾಮಹ ಪ್ರಪಿತಾಮಹಾನ್...... ಶರ್ಮಣಃ ........... ಗೋತ್ರಾನ್ ವಸುರುದ್ರಾದಿತ್ಯರೂಪಾನ್ ಸ್ವಧಾ ನಮಃ । ಭವತ್ಸ್ವಾವಾಹಯಾಮಿ ।

ಮಾತೃ ಪಿತಾಮಹೀ ಪ್ರಪಿತಾಮಹೀ ........ದಾಯೀಃ...........ಗೋತ್ರಾಃ ವಸುರುದ್ರಾದಿತ್ಯರೂಪಾಃ ಸ್ವಧಾ ನಮಃ । ಭವತ್ಸ್ವಾವಾಹಯಾಮಿ । ಇತಿ ಸ್ತ್ರೀಣಾಂ ।

ಇತ್ಯಾಸನೇಷು ತಿಲಪುಷ್ಪಾಣಿ ನಿಧಾಯ ।
(ಒಪ್ಪಿಗೆಯನ್ನು ಪಡೆದುಕೊಂಡು ಎರಡು ಕೈಗಳಲ್ಲೂ, ಹಿಡಿದುಕೊಂಡಿರುವ ಹೂ, ಎಳ್ಳನ್ನು 'ಆವಾಹಯಾಮಿ' ಎಂದು ಹೇಳಿ ಪಿತೃಗಳ ಆಸನದ ಎಡಭಾಗದಲ್ಲಿಡಬೇಕು.)

ಆವಾಹನಾರ್ಥಮುದಕಂ । (ಹಸ್ತಕ್ಕೆ ನೀರು)

ಅಥ ವಿಪ್ರಾಂಗುಷ್ಠಂ ಗೃಹೀತ್ವಾ ।
(ವಿಪ್ರನ ಬಲದ ಹೆಬ್ಬೆರಳನ್ನು ಹಿಡಿದು)

ಪಿತೃಪಿತಾಮಹಪ್ರಪಿತಾಮಹಾಃ ಕ್ಷಣಃ ಕ್ರಿಯತಾಂ । ಮಾತೃಪಿತಾಮಹೀ ಪ್ರಪಿತಾಮಹ್ಯಃ ಕ್ಷಣಃ ಕ್ರಿಯತಾಂ । ಓಂ ತಥಾ । (ಪ್ರತಿವಚನಂ) । ಪ್ರಾಪ್ನೋತು ಭವಾನ್। ಪ್ರಾಪ್ನವಾನಿ (ಎಂಬುದು ಪ್ರತಿವಚನವು )

ತತಃ ತಿಲೈರ್ವಾಮಭಾಗೇ ಶಿರೋಂಸಜಾನುಪಾದಂ ತೂಷ್ಣೀಮರ್ಚಯಿತ್ವಾ ಪಾತ್ರಾಂತರೇಣ ಅರ್ಘ್ಯಜಲಂ ಗೃಹೀತ್ವಾ ಪವಿತ್ರಂ ವಿಪ್ರಪಾಣೌ ದಕ್ಷಿಣಾಗ್ರಂ ನಿಧಾಯ ರಜತಪಾತ್ರೇಣ ರಜತಯುಕ್ತಹಸ್ತೇನ ವಾ ಅರ್ಘ್ಯಂ ದದಾತಿ ।
(ಪಿತೃವಿನ ಎಡಭಾಗಕ್ಕೆ ತಲೆಯಿಂದ ಪಾದದ ತನಕ ಎಳ್ಳಿನಿಂದ ಅರ್ಚಿಸಿ, ಅರ್ಘ್ಯ ಪಾತ್ರದಲ್ಲಿರಿಸಿದ ಪವಿತ್ರವನ್ನು ವಿಪ್ರನ ಕೈಯಲ್ಲಿ ದಕ್ಷಿಣಾಗ್ರವಾಗಿ ಇಟ್ಟು ಅರ್ಘ್ಯಪಾತ್ರದಲ್ಲಿರುವ ನೀರನ್ನು ಕೊಡಬೇಕು.)

ಓಂ ಯಾ ದಿವ್ಯಾಃ ಆಪಃ.......... ಭವಂತು ।

ಪಿತೃಪಿತಾಮಹ ಪ್ರಪಿತಾಮಹಾಃ ಇದಂ ವೋಽರ್ಘ್ಯಮಿದಂ ವೋಽರ್ಘ್ಯಮಿದಂ ವೋಽರ್ಘ್ಯಂ । (ಮಾತೃಪಿತಾಮಹಿಪ್ರಪಿತಾಮಹ್ಯಃ......)

ಹಸ್ತೋದಕಂ । ಪವಿತ್ರಂ ಅರ್ಘ್ಯಪಾತ್ರೇ ನಿಧಾಯ ।

ಓಂ ಯುವಾಸುವಾಸಾಃ ..........ದೇವಯಂತಃ ಆಚ್ಛಾದನಾರ್ಥೇ ವಸ್ತ್ರಂ । ಹಸ್ತೋದಕಂ ।

ಓಂ ಯಜ್ಞೋಪವೀತಂ ...............ತೇಜಃ । ಧಾರಣಾರ್ಥಮುಪವೀತಂ । ಹಸ್ತೋದಕಂ ।

ಓಂ ಗಂಧದ್ವಾರಾಂ......... ಶ್ರಿಯಂ । ಲೇಪನಾರ್ಥೇ ಇಮೇ ವೋ ಗಂಧಾಃ । ಸುಗಂಧಾಃ । ಹಸ್ತೋದಕಂ ।

ಓಂ ಅರ್ಚತ ಪ್ರಾರ್ಚತ ..........ರ್ಚತ । ಇಮೇ ವಸ್ತಿಲಾಕ್ಷತಾಃ । ಸಂತ್ವಕ್ಷತಾಃ । ಹಸ್ತೋದಕಂ ।

ಓಂ ಆಯನೇತೇ .............ಇಮೇ । ಇಮಾನಿ ವೋ ದೂರ್ವಾಂಕುರ ಭೃಂಗರಾಜಕುಶತುಲಸೀಶ್ವೇತಪತ್ರಪುಷ್ಪಾಣಿ ಮಾಲ್ಯಾನಿ । ಸಂತು ಪುಷ್ಪಾಣಿ ಮಾಲ್ಯಾನಿ । ಹಸ್ತೋದಕಂ ।

ಓಂ ಧೂರಸಿ ಧೂರ್ವ ಧೂರ್ವಂತಂ............ ಧೂರ್ವಾಮಃ । ಆಯಂ ವೋ ಧೂಪಃ । ಸುಧೂಪೋಽಸ್ತು । ಹಸ್ತೋದಕಂ ।

ಓಂ ಉದ್ದೀಪ್ಯಸ್ವ....... ದಿಶೋದಿಶ ॥ ಇದಂ ವೋ ಜ್ಯೋತಿಃ ಸುಜ್ಯೋತಿಃ ರಸ್ತು । ಹಸ್ತೋದಕಂ ।

ಓಂ ಯಾ ದಿವ್ಯಾಃ ಆಪಃ ಪಯಸಾ...........ಸ್ಯೋನಾ ಭವಂತು ।

ಪಿತೃಪಿತಾಮಹಪ್ರಪಿತಾಮಹಾಃ (ಮಾತೃಪಿತಾಮಹೀಪ್ರಪಿತಾಮಹ್ಯಃ) ಇದಂ ವಃ ಪುನರರ್ಘ್ಯಮಿದಂ ವಃ ಪುನರರ್ಘ್ಯಮಿದಂ ವಃ ಪುನರರ್ಘ್ಯಂ । ಅಸ್ತು ಪುನರರ್ಘ್ಯಂ । ಹಸ್ತೋದಕಂ ಶ್ರೀಪಾದ ಪದ್ಮಾಭ್ಯಾಂ ನಮಃ ।

ಆಧಿವ್ಯಾಧಿಹರಂನ್ನೃಣಾಂ.....,.ದಚ್ಯುತಂ ಪದಂ । ಉಪವೀತೀ ।

ಕೇಶಾದಿಪಾದಾಂತಂ ಸ್ವರ್ಚಿತಮಸ್ತು ॥ ಸ್ವಗೋತ್ರೋಽಹಮಭಿವಾದಯೇ ಇತ್ಯಭಿವಾದ್ಯ ॥

(ವಿಶ್ವೇದೇವರ ಅರ್ಚನೆಯಲ್ಲಿ ಮೇಲಿನ ಮಂತ್ರಗಳು ಬಂದಿರುವ ಕಾರಣ ಪ್ರತ್ಯೇಕವಾಗಿ ಇಲ್ಲಿ ಉದ್ಧರಿಸಲಿಲ್ಲ.)

ಪ್ರಾಚೀನಾವೀತೀ ।

ಉಶೀರಂ ಚಂದನಂ ಚೈವ ತಿಲದೂರ್ವಾಕುಶಾಗ್ರಕಂ ।
ತುಲಸೀಭೃಂಗಪತ್ರಾಣಿ ಜಲಂ ಚಾಪ್ಯರ್ಘ್ಯಮುಚ್ಯತೇ ॥

ಇತ್ಯೇತಾನಿ ಗೃಹೀತ್ವಾ । ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧೇ ಪಿತೃಪಿತಾಮಹಪ್ರಪಿತಾಮಹಾಃ (ಮಾತೃಪಿತಾಮಹೀಪ್ರಪಿತಾಮಹ್ಯಃ) ಇದಂ ವೋಽಪ್ಯರ್ಘ್ಯಂ ಸಂಪೂರ್ಣಮಸ್ತ್ವಿತಿ ಭವಂತೋ ಬ್ರುವಂತು । ಅಸ್ತ್ವಪ್ಯರ್ಘ್ಯಂ ಸಂಪೂರ್ಣಂ ।

ಆಸನಾದ್ಯರ್ಘ್ಯಾಂತಂ ಭವತ್ಸು ಮಯಾ ಕೃತಮಾರಾಧನಂ ಯಥಾ ಶಾಸ್ತ್ರೀಯಮಸ್ತ್ವಿತಿ ಭವಂತೋ ಬ್ರುವಂತು । ಯಥಾಶಾಸ್ತ್ರೀಯಮಸ್ತು ।

ಸಕಲಾರಾಧನೈಃ ಸ್ವರ್ಚಿತಮಸ್ತು । ಇತ್ಯರ್ಚನಂ ।

ಅಥ ಪಚನಾಗ್ನಿಹೋಮಃ ।

(ಪೂರ್ವಮುಖಿಮಾಡಿ ಕುಳಿತು ಪಾತ್ರೆಯಲ್ಲಿ ಬೆಂಕಿ ಕೆಂಡವನ್ನು ಇರಿಸಿಕೊಳ್ಳಬೇಕು. ಅದೇ ಯಜ್ಞಕುಂಡವೆಂದು ಭಾವಿಸಿ ಹೋಮಿಸಬೇಕು.)

ಪೂರ್ವೋಚ್ಚರಿತೈವಂಗುಣವಿಶೇಷಣವಿಶಿಷ್ಟಾಯಾಂ ಪುಣ್ಯತಿಥೌ ಅಸ್ಮತ್ ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧಾಂಗತಯಾ ವಿಹಿತಂ ಪಚನಾಗ್ನಿಹೋಮಂ ಕರಿಷ್ಯೇ । ಅಗ್ನಿಗೆ ಅಕ್ಷತೆಯನ್ನು ಹಾಕಿರಿ.

ಓಂ ಸ್ವಾಹಾ ಜುಷಸ್ವನಃ ಸಮಿಧಮಗ್ನೇ ಅದ್ಯಶೋಚಾ ಬೃಹದ್ಯಜತಂಧೂಮಮೃಣ್ವನ್ ‌। ಉಪಸ್ಪೃಶ್ಯ ದಿವ್ಯಗ್ಂ ಸಾನಸ್ತೂಪೈಃ ಸಗ್ಂ ರಶ್ಮಿಭಿಃ । ತತನಃ ಸೂರ್ಯಸ್ಯ । ಅದಿತೇನುಮನ್ಯಸ್ವ । ಅನುಮತೇನುಮನ್ಯಸ್ವ । ಸರಸ್ವತೇನುಮನ್ಯಸ್ವ । ದೇವಸವಿತಃ ಪ್ರಸುವ ।

ಕ್ರಮವಾಗಿ ಹೋಮದ ದಕ್ಷಿಣ ದಿಕ್ಕಿನಲ್ಲಿ ಪಶ್ಚಿಮದಿಂದ ಪೂರ್ವಕ್ಕೆ, ಪಶ್ಚಿಮ ದಿಕ್ಕಿನಲ್ಲಿ ದಕ್ಷಿಣದಿಂದ ಉತ್ತರಕ್ಕೆ, ಉತ್ತರ ದಿಕ್ಕಿನಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಮತ್ತು ಈಶಾನ್ಯದಿಂದ ಈಶಾನ್ಯಕ್ಕೆ ಪ್ರದಕ್ಷಿಣವಾಗಿ ನೀರನ್ನು ಪರ್ಯುಕ್ಷಿಸಬೇಕು. (ಹಾರಿಸಬೇಕು.)

ಓಂ ಅಗ್ನಯೇ ನಮಃ । ಓಂ ಜಾತವೇದಸೇ ನಮಃ ।
ಓಂ ಸಹೋಜಸೇ ನಮಃ । ಓಂ ಅಜಿರಾಪ್ರಭವೇ ನಮಃ ।
ಓಂ ವೈಶ್ವಾನರಾಯ ನಮಃ । ಓಂ ನರ್ಯಾಪಸೇ ನಮಃ ।
ಓಂ ಪಂಙ್ಕ್ತಿರಾಧಸೇ ನಮಃ । ಓಂ ವಿಸರ್ಪಿಣೇ ನಮಃ ।
ಓಂ ಯಜ್ಞೇಶ್ವರಾಯ ನಮಃ । ಗಂಧಪುಷ್ಪಾಕ್ಷತಾನ್ ಸಮರ್ಪಯಾಮಿ ।

(ಹೋಮಕ್ಕೆ ಪೂರ್ವ ದಿಕ್ಕಿನಿಂದ ಆರಂಭಿಸಿ ಪ್ರದಕ್ಷಿಣವಾಗಿ ಎಂಟು ದಿಕ್ಕಿನಲ್ಲಿ ಪೂಜಿಸಿ ಮಧ್ಯಕ್ಕೆ ಹೂವು ಗಂಧಾದಿಗಳಿಂದ ಸಮರ್ಪಿಸುವುದು.)

ಅಗ್ನಿಂ ಪ್ರಜ್ವಲಿತಂ ವಂದೇ ಜಾತವೇದಂ ಹುತಾಶನಂ ।
ಸುವರ್ಣವರ್ಣಮನಲಂ ಸಮಿದ್ಧಂ ವಿಶ್ವತೋಮುಖಂ ।

ಓಂ ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇಶೀರ್ಷೇ ಸಪ್ತಹಸ್ತಾಸೋ ಅಸ್ಯ । ತ್ರಿಧಾ ಬದ್ಧೋ ವೃಷಭೋರೋರವೀತಿ ಮಹೋ ದೇವೋ ಮರ್ತ್ಯಾಗ್‌ಂ ಆವಿವೇಶ ಸ್ವಾಹಾ ।

ಪ್ರಜಾಪತಯ ಇದಂ ನಮಮ । ಇತಿ ಮನಸಾ ಹುತ್ವಾ ।

(ನಾಲ್ಕು ಸ್ವಾಹಾ ಕೋಲನ್ನು ಹೋಮಿಸುವುದು) ಎರಡು ಬಾಳೆಲೆಯಲ್ಲಿ ಅನ್ನವನ್ನು ತಂದು ಇಟ್ಟುಕೊಳ್ಳಬೇಕು.

ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧೇ ಪುರೂರವಾರ್ದ್ರವಸಂಜ್ಞಕಾಃ ವಿಶ್ವೇದೇವಾಃ ಇದಮನ್ನಂ ಹೋಮಾರ್ಥಂ ಹವಿರಿದಮುದ್ಧ್ರಿಯತೇ । ಅಗ್ನೌ ಚ ಕ್ರಿಯತೇ । ಕಾಮಮುದ್ಧ್ರಿಯತಾಂ । ಕಾಮಮಗ್ನೌ ಚ ಕ್ರಿಯತಾಂ ।

ಆಹುತಿ ಅನ್ನಕ್ಕೆ ಅಭಿಘಾರ ಮಾಡಬೇಕು.

ಓಂ ಪುರೂರವಸಂಜ್ಞಕೇಭ್ಯೋ ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ।

ಪುರೂರವಸಂಜ್ಞಕೇಭ್ಯೋ ವಿಶ್ವೇಭ್ಯೋ ದೇವೇಭ್ಯ ಇದಂ ನ ಮಮ ॥

ಓಂ ಆರ್ದ್ರವಸಂಜ್ಞಕೇಭ್ಯೋ ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ।

ಆರ್ದ್ರವಸಂಜ್ಞಕೇಭ್ಯೋ ವಿಶ್ವೇಭ್ಯೋ ದೇವೇಭ್ಯ ಇದಂ ನ ಮಮ ॥

ಹೀಗೆ ಎರಡು ಸಲ ಅನ್ನವನ್ನು ಆಹುತಿ ಮಾಡುವುದು. ಪುನಃ

ಓಂ ಭೂಃ ಸ್ವಾಹಾ । ಅಗ್ನಯಂ ಇದಂ ನ ಮಮ ।

ಓಂ ಭುವಃ ಸ್ವಾಹಾ । ವಾಯವ ಇದಂ ನ ಮಮ ।

ಓಗ್‌ಂ ಸುವಃ ಸ್ವಾಹಾ । ಸೂರ್ಯಾಯೇದಂ ನ ಮಮ ।

ಓಂ ಭೂರ್ಭುವಸ್ಸುವಃ ಸ್ವಾಹಾ । ಪ್ರಜಾಪತಯ ಇದಂ ನ ಮಮ ।

(ಹೀಗೆ ಆರು ಬಾರಿ ಚರ್ವಾಹುತಿ ಮಾಡಬೇಕು.)

ಪ್ರಾಚೀನಾವೀತೀ ಪಿತುಃ (ಮಾತುಃ) ಪ್ರತಿಸಾಂವತ್ಸರಿಕಶ್ರಾದ್ಧೇ ಪಿತೃಪಿತಾಮಹ ಪ್ರಪಿತಾಮಹಾಃ । (ಮಾತೃಪಿತಾಮಹೀ ಪ್ರಪಿತಾಮಹ್ಯಃ) ಇದಮನ್ನಂ ಹೋಮಾರ್ಥಂ ಕವ್ಯಮಿದಮುದ್ಧ್ರಿಯತೇ ಅಗ್ನೌ ಚ ಕ್ರಿಯತೇ । ಕಾಮಮುದ್ಧ್ರಿಯತಾಂ । ಕಾಮ ಮಗ್ನೌ ಚ ಕ್ರಿಯತಾಂ ।

(ಎರಡನೇ ಎಲೆಯ ಚರುವಿಗೆ ಅಭಿಘಾರ.)

ಓಂ ಸೋಮಾಯ ಪಿತೃಪೀತಾಯ ಸ್ವಧಾನಮ ಸ್ವಾಹಾ ।
ಸೋಮಾಯ ಪಿತೃಪೀತಾಯೇದಂ ನ ಮಮ ॥
ಓಂ ಯಮಾಯಾಂಗಿರಸ್ವತೇ ಪಿತೃಮತೇ ಸ್ವಧಾನಮ ಸ್ವಾಹಾ ।
ಯಮಾಯಾಂಗಿರಸ್ವತೇ ಪಿತೃಮತ ಇದಂ ನ ಮಮ ॥
ಓಂ ಅಗ್ನಯೇ ಕವ್ಯವಾಹನಾಯ ಸ್ವಿಷ್ಟಕೃತೇ ಸ್ವಧಾ ನಮಃ ಸ್ವಾಹಾ ।
ಅಗ್ನಯೇ ಕವ್ಯವಾಹನಾಯ ಸ್ವಿಷ್ಟಕೃತ ಇದಂ ನ ಮಮ ॥
ಉಪವೀತೀ ।

ಓಂ ಭೂಃ ಸ್ವಾಹಾ ......... (ಇತ್ಯಾದಿ ನಾಲ್ಕು ಆಹುತಿಗಳು. ಒಟ್ಟು ಏಳು ಆಹುತಿಗಳು)

ಓಂ ಸ್ವಾಹಾ ಜುಷಸ್ವನಃ ........ಸೂರ್ಯಸ್ಯ (ಹೋಮಕ್ಕೆ ಸ್ವಾಹಾ ಕೋಲು ಹಾಕುವುದು.)

ಅದಿತೇನ್ವಮಗ್ಂಸ್ಥಾಃ । ಅನುಮತೇನ್ವಮಗ್ಂಸ್ಥಾಃ । ಸರಸ್ವತೇನ್ವ ಮಗ್ಂಸ್ಥಾಃ ದೇವ ಸವಿತಃ ಪ್ರಾಸಾವೀಃ ।

ಮೊದಲಿನಂತೆ ನೀರು ಸುತ್ತು ಕಟ್ಟುವುದು. (ಪರ್ಯುಕ್ಷಿಸುವುದು.)

